KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಜುಲೈ ೨೭, ೨೦೦೬ (ಶ್ರಾವಣ ೫, ಶಕ ವರ್ಷ ೧೯೨೮) | ಸಂಚಿಕೆ ೩೦ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ಹುದ್ದೆಗಳ ಪುನರ್ ಪದನಾಮೀಕರಣ ಕುರಿತು.

**ಓದಲಾಗಿದೆ:** ಪ್ರಧಾನ ಕಾರ್ಯದರ್ಶಿ, ಸಾರ್ವಜನಿಕ ಉದ್ದಿಮೆಗಳ ಇಲಾಖೆ ಅವರ ಅ.ಸ.ಪತ್ರ ಸಂಖ್ಯೆ: ಸಾಉಇ 139 ಎಂಇಎ 2006, ದಿನಾಂಕ: 6.6.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು ಕರ್ನಾಟಕ ರಾಜ್ಯ ಸಾರ್ವಜನಿಕ ಉದ್ದಿಮೆಗಳ ಮಹೋದ್ಯಮಗಳನ್ನು ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 654 ಎಸ್‌ಟಿಡಿ 80 ದಿನಾಂಕ:7.7.1980ರ ಪ್ರಕಾರ ಸೃಜಿಸಲಾಗಿತ್ತೆಂದು ನಂತರ ಆ ಇಲಾಖೆಯನ್ನು ಕೆ.ಎಸ್.ಬಿ.ಪಿ.ಇ ಎಂದು ಪುನರ್ ಪದನಾಮೀಕರಿಸಲಾಗಿದೆಯೆಂದು ತದನಂತರ ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಸಿಎ 3 ಎಆರ್‌ಬಿ 2004 ದಿನಾಂಕ: 24.3.2005ರ ಪ್ರಕಾರ ಸಾರ್ವಜನಿಕ ಉದ್ದಿಮೆಗಳ ಇಲಾಖೆಯೆಂದು ಹೆಸರು ಬದಲಾಯಿಸಿದೆ. ಇದು ಸಚಿವಾಲಯದ ಇಲಾಖೆಯಾಗಿರುವುದರಿಂದ ಆ ಇಲಾಖೆಯಲ್ಲಿರುವ ಕೆಲವು ಹುದ್ದೆಗಳ ಪದನಾಮವನ್ನು ಬದಲಾವಣೆ ಮಾಡುವಂತೆ ಹಾಗೂ ಮಂಜೂರಾಗಿರುವ ನಾಲ್ಕು ಉಪ ನಿರ್ದೇಶಕರು ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿಗಳ ಹುದ್ದೆಗಳ ಪೈಕಿ ಪ್ರಸ್ತುತ 3 ಹುದ್ದೆಗಳು ಖಾಲಿ ಇದ್ದು ಅವುಗಳ ಅವಶ್ಯಕತೆಯಿಲ್ಲದಿರುವುದು ಕಂಡುಬಂದಿರುವುದರಿಂದ ಆ ಮೂರು ಹುದ್ದೆಗಳನ್ನು ರದ್ದುಪಡಿಸುವಂತೆಯೂ ಮತ್ತು ಆ ಇಲಾಖೆಯ ಹಿಂದಿನ ವ್ಯವಸ್ಥೆಗನುಗುಣವಾಗಿ ಒಂದು ಲೆಕ್ಕಪತ್ರ ಶಾಖೆ ಸಹ ಇದ್ದು ಪ್ರಸ್ತುತ ಆ ಇಲಾಖೆಯು ಸಚಿವಾಲಯದ ಇಲಾಖೆಯಾಗಿರುವುದರಿಂದ ಲೆಕ್ಕಪತ್ರ ಶಾಖೆಯ ಅವಶ್ಯವಿರುವುದಿಲ್ಲವೆಂದು ಕಂಡುಬಂದಿರುವುದರಿಂದ ಆ ಶಾಖೆಯನ್ನು ರದ್ದುಪಡಿಸುವಂತೆ ಮತ್ತು ಇನ್ನು ಮುಂದೆ ಆ ಇಲಾಖೆಯಲ್ಲಿನ ಎಲ್ಲಾ ಅಧಿಕಾರಿ/ನೌಕರರುಗಳಿಗೆ ಇತರೆ ಇಲಾಖೆಗಳಂತೆ ಸಂಬಳ ಮತ್ತು ಇತರೆ ಭತ್ಯೆಗಳನ್ನು ಸಿಆಸುಇಲಾಖೆಯ ಲೆಕ್ಕಪತ್ರ ಶಾಖೆ ಮೂಲಕ ವಿತರಿಸುವ ವ್ಯವಸ್ಥೆ ಮಾಡಬೇಕೆಂದು ಕೋರಿರುತ್ತಾರೆ ಹಾಗೂ ಪ್ರಸ್ತುತ ಆ ಇಲಾಖೆಯ ಲೆಕ್ಕಪತ್ರ ಶಾಖೆಯಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ನೌಕರರ ಸೇವೆಯನ್ನು ಆ ಶಾಖೆಯನ್ನು ರದ್ದುಪಡಿಸಿದ ನಂತರ ಮಾತೃ ಇಲಾಖೆಗೆ ಹಿಂದಿರುಗಿಸಲು ಕ್ರಮ ಕೈಗೊಳ್ಳುವುದಾಗಿ ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 50 ಸಸಿವಿ 2006, ಬೆಂಗಳೂರು, ದಿನಾಂಕ: 27ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಸಾರ್ವಜನಿಕ ಉದ್ದಿಮೆಗಳ ಇಲಾಖೆಯಲ್ಲಿನ ಈ ಕೆಳಕಂಡ ಹುದ್ದೆಗಳ ಪದನಾಮವನ್ನು ಆ ಹುದ್ದೆಗಳ ಮುಂದೆ ಸೂಚಿಸಿದಂತೆ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರಿಗೆ ಪುನರ್ ಪದನಾಮೀಕರಿಸಲಾಗಿದೆ.

| ಕ್ರ. ಸಂ. | ಈ ಹಿಂದೆ ಮಂಜೂರಾದ ಹುದ್ದೆಗಳು | ಹುದ್ದೆಗಳ ಸಂಖ್ಯೆ | ಪದನಾಮ ಬದಲಾವಣೆ ಮಾಡಿದ ಹುದ್ದೆಗಳು |
|---|---|---|---|
| 1 | ನಿರ್ದೇಶಕರು ಮತ್ತು ಪದನಿಮಿತ್ತ ಸರ್ಕಾರದ ಕಾರ್ಯದರ್ಶಿಗಳು | 01 | ಸರ್ಕಾರದ ಕಾಯದರ್ಶಿ |
| 2 | ಅಪರ ನಿರ್ದೇಶಕರು | 01 | ಜಂಟಿ ಕಾರ್ಯದರ್ಶಿ |
| 3 | ಜಂಟಿ ನಿರ್ದೇಶಕರು ಮತ್ತು ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ | 02 | ಸರ್ಕಾರದ ಉಪ ಕಾರ್ಯದರ್ಶಿ |

| ಕ್ರ. ಸಂ. | ಈ ಹಿಂದೆ ಮಂಜೂರಾದ ಹುದ್ದೆಗಳು | ಹುದ್ದೆಗಳ ಸಂಖ್ಯೆ | ಪದನಾಮ ಬದಲಾವಣೆ ಮಾಡಿದ ಹುದ್ದೆಗಳು |
|---|---|---|---|
| 4 | ಆಡಳಿತಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ) | 01 | ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ) |
| 5 | ಉಪ ನಿರ್ದೇಶಕರು ಮತ್ತು ಪದ ನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ | 04 | ಸರ್ಕಾರದ ಅಧೀನ ಕಾರ್ಯದರ್ಶಿ |
| 6 | ಸಹಾಯಕ ನಿರ್ದೇಶಕರು | 02 | ಶಾಖಾಧಿಕಾರಿ |
| 7 | ಡಾಟಾ ಎಂಟ್ರಿ ಆಪರೇಟರ್ | 02 | ಕಂಪ್ಯೂಟರ್ ಆಪರೇಟರ್ |

ಹಾಗೂ ಪ್ರಸ್ತುತ ಇಲಾಖೆಗೆ ಮಂಜೂರಾಗಿರುವ ನಾಲ್ಕು ಉಪ ನಿರ್ದೇಶಕರು ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿಗಳ ಹುದ್ದೆಗಳ ಪೈಕಿ, ಪ್ರಸ್ತುತ ಖಾಲಿ ಇರುವ 3 ಹುದ್ದೆಗಳ ಜೊತೆಗೆ ಆ ಇಲಾಖೆಯಲ್ಲಿ ಪ್ರಸ್ತುತ ಅಸ್ತಿತ್ವವಿರುವ ಲೆಕ್ಕಪತ್ರ ಶಾಖೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಿದೆ ಹಾಗೂ ಲೆಕ್ಕಪತ್ರ ಶಾಖೆಯಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ/ನೌಕರರ ಸೇವೆಯನ್ನು ಅವರುಗಳ ಮಾತೃ ಇಲಾಖೆಗೆ ಹಿಂದಿರುಗಿಸಲು ಶೀಘ್ರ ಕ್ರಮ ತೆಗೆದುಕೊಳ್ಳುವಂತೆ ಸಾರ್ವಜನಿಕ ಉದ್ದಿಮೆಗಳ ಇಲಾಖೆಯನ್ನು ಕೋರಿದೆ.

ಆ ಇಲಾಖೆಯ ಎಲ್ಲಾ ಅಧಿಕಾರಿ : ನೌಕರರುಗಳ ಸಂಬಳ ಮತ್ತು ಇತರೆ ಭತ್ಯೆಗಳನ್ನು ಜುಲೈ 2006 ಮಾಹೆಯಿಂದ ಸಿ.ಆ.ಸು.ಇಲಾಖೆ (ಲೆಕ್ಕಪತ್ರಗಳು-1) (ಲೆಕ್ಕಪತ್ರಗಳು-2/ಆರ್ಎಲ್ಎ) ವಿಭಾಗಗಳ ಮೂಲಕ ವಿತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 980

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಶ್ರೀ ಡಿ.ಬಿ. ಗಣಾಚಾರಿ, ಶ್ರೀ ಎಸ್.ಆರ್. ಹಿರೇಮಠ, ಸರ್ಕಾರದ ಅಧೀನ ಕಾರ್ಯದರ್ಶಿಗಳು ಹಾಗೂ ಶ್ರೀ ಜಿ. ಮುನಿರಾಜಪ್ಪ, ಹಿರಿಯ ಸಹಾಯಕರು, ಕರ್ನಾಟಕ ಸರ್ಕಾರದ ಸಚಿವಾಲಯ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 19 ಎಸ್ಇಎನ್ 2004 ದಿನಾಂಕ: 28.6.2005.
2. ಶ್ರೀ ಎನ್. ಉಮಾಪತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಅವರ ದಿ.7.11.2005ರ ವಿಚಾರಣಾ ವರದಿ.
3. 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಸಿಆಸುಇ 19 ಎಸ್ಇಎನ್ 2004 ದಿ.1.4.2006.
4. ಶ್ರೀ ಡಿ.ಬಿ. ಗಣಾಚಾರಿ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರು ಲಿಖಿತ ಉತ್ತರ ಸಲ್ಲಿಸಿರುವುದಿಲ್ಲ.
5. ಶ್ರೀ ಎಸ್.ಆರ್. ಹಿರೇಮಠ್, ಅಧೀನ ಕಾರ್ಯದರ್ಶಿ ರವರ ದಿನಾಂಕ 13.4.06ರ ಲಿಖಿತ ಉತ್ತರ.
6. ಶ್ರೀ ಜಿ. ಮುನಿರಾಜಪ್ಪ, ಹಿರಿಯ ಸಹಾಯಕ, ಜಲ ಸಂಪನ್ಮೂಲ ಇಲಾಖೆ ಇವರ ದಿ.7.4.06ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರದ ಸಚಿವಾಲಯದ, ನಗರಾಭಿವೃದ್ಧಿ ಇಲಾಖೆಯಲ್ಲಿ ಶ್ರೀ ಡಿ.ಬಿ. ಗಣಾಚಾರಿಯವರು ಅಧೀನ ಕಾರ್ಯದರ್ಶಿಯಾಗಿ, ಶ್ರೀ ಎಸ್.ಆರ್. ಹಿರೇಮಠ್‌ರವರು ಶಾಖಾಧಿಕಾರಿಯಾಗಿ, ಶ್ರೀ ಜಿ. ಮುನಿರಾಜಪ್ಪ, ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ಪುರಸಭೆಗೆ, ಸಂಬಂಧಿಸಿದ, 167'x147' ಅಡಿ ಅಳತೆಯ ನಿವೇಶನವನ್ನು ಶ್ರೀ ಭೀಮಣ್ಣ ಎನ್ನುವವರಿಗೆ ಶಾಶ್ವತ ಚಿತ್ರಮಂದಿರ ನಿರ್ಮಿಸಲು, ಮಂಜೂರು ಮಾಡಲು ಸರ್ಕಾರದ ಆದೇಶ ಸಂಖ್ಯೆ:ನಅಇ 180 ಟಿಎಂಡಿ 95 ದಿನಾಂಕ: 18.1.1997ರಲ್ಲಿ ಅಂದಿನ ಅಧೀನ ಕಾರ್ಯದರ್ಶಿ ಶ್ರೀ ಡಿ.ಬಿ. ಗಣಾಚಾರಿರವರ ಸಹಿಯಲ್ಲಿ ಆದೇಶವನ್ನು ಹೊರಡಿಸಲಾಗಿದೆ. ಇದರಂತೆ ಶ್ರೀ ಭೀಮಣ್ಣನವರಿಗೆ ಚಳ್ಳಕೆರೆಯ ಪುರಸಭೆಯು ಒಂದು ಚದರ ಮೀಟರಿಗೆ ರೂ.100.00 ರಂತೆ ದರ ವಸೂಲಿ ಮಾಡಿ ನಿವೇಶನವನ್ನು ನೊಂದಾಯಿಸಿಕೊಟ್ಟಿರುತ್ತದೆ. ಆದರೆ ತತ್ಸಂಬಂಧ ಕಡತ ಮತ್ತು ಆದೇಶದ ಕಛೇರಿ ಪ್ರತಿಯಲ್ಲಿ ಒಂದು ಚದರ ಅಡಿಗೆ ರೂ.100.00 ದರ ವಿಧಿಸಿ ಮಾರಾಟ ಮಾಡಲು ಅನುಮೋದನೆಯಾಗಿರುತ್ತದೆ. ಆದ್ದರಿಂದ ಆದೇಶದ ಮೂಲ ಪ್ರತಿಯಲ್ಲಿ ಚದರ ಅಡಿ ಅನ್ನುವ ಬದಲಾಗಿ, ಚದರ ಮೀಟರ್ ಎಂದು ನಮೂದಿಸಿ ಕಛೇರಿ ಪ್ರತಿಯಲ್ಲಿ ಚದರ ಅಡಿ ಎಂದು ತಿದ್ದಿ ಪುರಸಭೆಗೆ ರೂ.26,95,481/- ನಷ್ಟವುಂಟಾಗಲು ಕಾರಣರಾಗಿರುತ್ತಾರೆ ಎಂಬ ಆರೋಪ ಹಾಗೂ ಈ ವಿಷಯದ ಕಡತ ಸಂ:ನಅಇ 180 ಟಿಎಂಡಿ 95ರ 2 ಟಿಪ್ಪಣಿ ಹಾಳೆಗಳನ್ನು ಹರಿದು ಹಾಕಿದ ದುರ್ನಡತೆಯ ಆರೋಪಕ್ಕಾಗಿ ಶ್ರೀ ಡಿ.ಬಿ. ಗಣಾಚಾರಿ, ಹಿಂದಿನ ಸರ್ಕಾರದ ಅಧೀನ ಕಾರ್ಯದರ್ಶಿ, ಶ್ರೀ ಎಸ್.ಆರ್. ಹಿರೇಮಠ, ಹಿಂದಿನ ಶಾಖಾಧಿಕಾರಿ ಹಾಗೂ ಶ್ರೀ ಜಿ. ಮುನಿರಾಜಪ್ಪ, ಹಿಂದಿನ ಸಹಾಯಕರು ಅವರುಗಳ ಮೇಲೆ ಹೊರಿಸಲಾದ ಆರೋಪಗಳ ಕುರಿತು ವಿಚಾರಣೆ ಮಾಡಲು ಶ್ರೀ ಎನ್. ಉಮಾಪತಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ: 28.6.2005ರ ಸರ್ಕಾರಿ ಆದೇಶದಲ್ಲಿ ನೇಮಕ ಮಾಡಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ:7.11.2005ರ ವಿಚಾರಣಾ ವರದಿ ಸಲ್ಲಿಸಿ ಆರೋಪ ಕುರಿತು ಈ ಮುಂದಿನಂತೆ ನಿರ್ಣಯ ನೀಡಿರುತ್ತಾರೆ.

I. ಈ ಪ್ರಕರಣದಲ್ಲಿ ಒಬ್ಬರೇ ಸಾಕ್ಷಿಯಾದ ಶ್ರೀ ಕೆಂಪವೀರಯ್ಯ, ಅಧೀನ ಕಾರ್ಯದರ್ಶಿರವರು ವಿಚಾರಣಾಧಿಕಾರಿಯವರ ಮುಂದೆ ಸಾಕ್ಷಿ ಹೇಳಿಕೆ ನೀಡುತ್ತಾ ಇವರು ನಗರಾಭಿವೃದ್ಧಿ ಇಲಾಖೆಯಲ್ಲಿ ಆಗ ಶಾಖಾಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದು, ಸಮನ್ವಯ ಶಾಖೆಯ ಅಧೀನ ಕಾರ್ಯದರ್ಶಿಯ ಪ್ರಭಾರದಲ್ಲೂ ಸಹ ಇದ್ದಾರೆಂದು ಆಗ ಸಿಆಸು ಇಲಾಖೆಯು ಚಳ್ಳಕೆರೆ ಪುರಸಭೆಗೆ ಜಮೀನು ಮಂಜೂರು ಮಾಡುವ ಸಂಬಂಧ ಕೆಲವು ಮಾಹಿತಿ ಮತ್ತು ಕಡತಗಳನ್ನು ಕೇಳಿದಾಗ ಅದನ್ನು ಕಳುಹಿಸಿಕೊಟ್ಟಿರುತ್ತೇನೆಂದೂ, ಮೂವರು ಆಪಾದಿತರನ್ನು ತಾನು ಬಲ್ಲೆನೆಂದು, ಆದರೆ ಪ್ರಶ್ನಿತ ಕಡತವನ್ನು ತಾನು ಎಂದೂ ನೋಡಿಲ್ಲವೆಂದು, ಅದರಲ್ಲಿ ಏನಿದೆ ಎಂದು ತಿಳಿದಿಲ್ಲವೆಂದು ಆ ಬಗ್ಗೆ ಏನೂ ಹೇಳಲು ಸಾಧ್ಯವಿಲ್ಲವೆಂದು ತಿಳಿಸಿರುತ್ತಾರೆ.

II. ಮಂಡನಾಧಿಕಾರಿಯು ಈ ಪ್ರಕರಣವು ಪ್ರಧಾನವಾಗಿ ಸಾಕ್ಷಿದಾರರ ಹೇಳಿಕೆಯ ಮೇಲೆ ಅವಲಂಬಿತವಾಗಿರುತ್ತದೆಂದು ತಿಳಿಸಿ ಸದರಿ ಸಾಕ್ಷ್ಯವನ್ನು ಪರಿಗಣನೆಗೆ ತೆಗೆದುಕೊಳ್ಳುವಂತೆ ತಿಳಿಸಿದ್ದಾರೆ.

III. ಎಲ್ಲಾ ಆಪಾದಿತರುಗಳು ಅವರುಗಳ ಮೇಲಿನ ಆರೋಪಗಳನ್ನು ನಿರಾಕರಿಸಿರುವುದನ್ನು ಮತ್ತು ಸಾಕ್ಷಿದಾರರ ಹೇಳಿಕೆ ಹಾಗೂ ಮಂಡನಾಧಿಕಾರಿಯ ವಾದವನ್ನು ಗಣನೆಗೆ ತೆಗೆದುಕೊಂಡು ವಿಚಾರಣಾಧಿಕಾರಿಯು, ಸಾಕ್ಷಿಯು ಕಡತದ ಬಗ್ಗೆ ಶಿಸ್ತು ಪ್ರಾಧಿಕಾರಿಯ ಪರವಾಗಿ ಏನನ್ನೂ ಹೇಳದಿದ್ದ ಪಕ್ಷದಲ್ಲಿ ಕಡತವನ್ನು ಮಾತ್ರ ವಿಚಾರಣೆಯಲ್ಲಿ ಹಾಜರುಪಡಿಸುವುದರಿಂದ ಯಾವುದೇ ಪ್ರಯೋಜನವಿಲ್ಲವೆಂದು ಭಾವಿಸಿ ಎಲ್ಲಾ ಆಪಾದಿತರುಗಳ ಮೇಲಿನ ಆರೋಪಗಳು ರುಜುವಾತಾಗಿಲ್ಲವೆಂಬ ನಿರ್ಣಯಕ್ಕೆ ಬಂದಿರುತ್ತಾರೆ.

ಮೇಲ್ಕಂಡ ವರದಿಯನ್ನು ಪರಿಶೀಲಿಸಲಾಗಿ ವಿಚಾರಣಾಧಿಕಾರಿಯು ಪ್ರಕರಣವನ್ನು ಬಹಳ ಉದಾಸೀನದಿಂದ ತೆಗೆದುಕೊಂಡಿರುವುದು, ಸರ್ಕಾರದ ಸಾಕ್ಷಿ ಮತ್ತು ಮಂಡನಾಧಿಕಾರಿಯವರು ಸಮರ್ಪಕವಾಗಿ ಅವರ ಕಾರ್ಯವನ್ನು ನಿರ್ವಹಿಸದೇ ಇರುವುದನ್ನು ಪ್ರಧಾನವಾಗಿ ಗಣನೆಗೆ ತೆಗೆದುಕೊಂಡಿರುವುದು ಕಂಡು ಬರುತ್ತದೆ. ಈ ಪ್ರಕರಣದಲ್ಲಿ ಸರ್ಕಾರಕ್ಕೆ ಸುಮಾರು ರೂ.26.00 ಲಕ್ಷ ನಷ್ಟ ಉಂಟಾಗಿದ್ದು, ಪ್ರಶ್ನಿತ ಕಡತದ ಕಛೇರಿ ಪ್ರತಿಯಲ್ಲಿ ಪ್ರತಿ ಚದರಡಿಗೆ ಎಂದು ನಮೂದಿಸಿದ್ದು, ರವಾನೆಯಾಗಿರುವ ಮೂಲ ಪ್ರತಿಯಲ್ಲಿ ಪ್ರತಿ ಚದರ ಮೀಟರ್‌ಗೆ ಎಂದು ನಮೂದಿಸಿರುವುದು ಮತ್ತು ಕಡತದ ಟಿಪ್ಪಣಿ ಹಾಳೆಗಳನ್ನು ಹರಿದು ಹಾಕಿರುವುದನ್ನು ಗಮನಿಸಿದಲ್ಲಿ ಈ ದುರ್ನಡತೆಯು ವಿಷಯ ನಿರ್ವಾಹಕ, ಶಾಖಾಧಿಕಾರಿ/ಅಧೀನ ಕಾರ್ಯದರ್ಶಿ ಇವರುಗಳ ಪಾತ್ರವಿಲ್ಲದೆ ನಡೆದಿರುತ್ತದೆ ಎಂಬುದನ್ನು ನಂಬಲು ಸಾಧ್ಯವಿಲ್ಲ. ಆದೇಶದ ಕಛೇರಿ ಪ್ರತಿಯಲ್ಲಿ ಆದೇಶದ ಭಾಗದ ಎರಡನೇ ಸಾಲಿನಲ್ಲಿ "ಅಡಿಗೆ" ಎಂಬುದನ್ನು ತದನಂತರ ಬೆರಳಚ್ಚುಗೊಳಿಸಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ. ಇಂತಹ ಗುರುತರವಾದ ಆಪಾದನೆಯನ್ನು ಋಜುವಾತುಪಡಿಸಲು ನ್ಯಾಯಾಂಗ ಪ್ರಕರಣಗಳಲ್ಲಿ ಅವಲಂಬಿಸಬೇಕಾಗಿರುವ Degree or Standard of Proofನ್ನು ಇಲಾಖಾ ಶಿಸ್ತಿನ ಪ್ರಕರಣಗಳಲ್ಲಿ insist ಮಾಡುವ ಅಗತ್ಯವಿರುವುದಿಲ್ಲ. ಮೇಲ್ನೋಟಕ್ಕೆ ಈ ದುರ್ನಡತೆಯು ಸ್ಪಷ್ಟವಾಗಿ ಆಪಾದಿತರ ಮೇಲೆ ಬೆರಳನ್ನು ತೋರಿಸುತ್ತದೆ.

ಆದ್ದರಿಂದ ವಿಚಾರಣಾ ವರದಿಯನ್ನು ಒಪ್ಪದೆ ಆರೋಪ ಸಾಬೀತಾಗಿದೆ ಎಂಬ ನಿಲುವು ತಳೆದು ಶ್ರೀ ಡಿ.ಬಿ. ಗಣಾಚಾರಿ, ಶ್ರೀ ಎಸ್.ಆರ್. ಹಿರೇಮಠ್, ಸರ್ಕಾರದ ಅಧೀನ ಕಾರ್ಯದರ್ಶಿಗಳು, ಶ್ರೀ ಜಿ. ಮುನಿರಾಜಪ್ಪ, ಹಿರಿಯ ಸಹಾಯಕರು, ಕರ್ನಾಟಕ ಸರ್ಕಾರದ ಸಚಿವಾಲಯ ಇವರುಗಳಿಗೆ ವಿಚಾರಣಾ ವರದಿಯ ಪ್ರತಿಯೊಡನೆ ಮೇಲೆ (3)ರಲ್ಲಿ ಓದಲಾದ ದಿನಾಂಕ: 1.4.2006ರ 2ನೇ ಕಾರಣ ಕೇಳುವ ನೋಟೀಸನ್ನು ನೀಡಿ ಸಮಜಾಯಿಷಿಯನ್ನು ಕೇಳಲಾಯಿತು. ನೋಟೀಸಿಗೆ ಶ್ರೀ ಡಿ.ಬಿ. ಗಣಾಚಾರಿ, ಸರ್ಕಾರದ ಅಧೀನ ಕಾರ್ಯದರ್ಶಿಯವರು ಇದುವರೆಗೂ ಉತ್ತರವನ್ನು ಸಲ್ಲಿಸಿರುವುದಿಲ್ಲ. ಮತ್ತೊಬ್ಬ ಆರೋಪಿತರಾದ ಶ್ರೀ ಎಸ್.ಆರ್. ಹಿರೇಮಠ್ ಅವರು ಮೇಲೆ (5)ರಲ್ಲಿ ಓದಲಾದ ದಿನಾಂಕ: 13.4.2006ರ ಉತ್ತರ ನೀಡಿ ತಾವು ಕೇವಲ ಶಾಖಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದೆನು. ಅಂದು ಅಧೀನ ಕಾರ್ಯದರ್ಶಿಯಲ್ಲವಾದ್ದರಿಂದ ತಮಗೆ ಸಹಿ ಮಾಡಿ ಆದೇಶ ಹೊರಡಿಸುವ ಅಧಿಕಾರವಿಲ್ಲವೆಂದು, ಕಡತ ನಿರ್ವಹಣೆ ಕೇವಲ ವಿಷಯ ನಿರ್ವಾಹಕರ ಮತ್ತು ಕಿರಿಯ ಸಹಾಯಕರ ಕರ್ತವ್ಯವೆಂದು ತಿಳಿಸುತ್ತಾ, ತಮ್ಮ ವಿರುದ್ಧ ಮಾಡಿರುವ ಆರೋಪಗಳು ಸರಿಯಲ್ಲವೆಂದು, ಹೀಗಾಗಿ ವಿಚಾರಣಾಧಿಕಾರಿಯವರು ನೀಡಿರುವ ವಿಚಾರಣಾ ವರದಿಯನ್ನು ಒಪ್ಪಿಕೊಂಡು ತಮ್ಮನ್ನು ಆರೋಪ ಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ. ಶ್ರೀ ಜಿ. ಮುನಿರಾಜಪ್ಪ, ಹಿರಿಯ ಸಹಾಯಕರು ಮೇಲೆ (6)ರಲ್ಲಿ ಓದಲಾದ ದಿನಾಂಕ: 7.4.2006ರ ತಮ್ಮ ಲಿಖಿತ ಉತ್ತರ ನೀಡಿ ಇದರಲ್ಲಿ ತಮ್ಮದೇನೂ ಪಾತ್ರವಿಲ್ಲ. ಆದುದರಿಂದ ತಮ್ಮನ್ನು ಆರೋಪ ಮುಕ್ತರನ್ನಾಗಿಸಬೇಕೆದು ಕೋರಿದ್ದಾರೆ.

ಪ್ರಕರಣವನ್ನು ಆರೋಪಿತರುಗಳು ಸಲ್ಲಿಸಿರುವ ಉತ್ತರಗಳ ಬೆಳಕಿನಲ್ಲಿ ಹಾಗೂ ದಾಖಲೆಗಳೊಡನೆ ಮತ್ತೊಮ್ಮೆ ಪರಿಶೀಲಿಸಲಾಯಿತು. ಈ ಪ್ರಕರಣದಲ್ಲಿ ಸರ್ಕಾರಕ್ಕೆ ಸುಮಾರು ರೂ.26.00 ಲಕ್ಷ ನಷ್ಟ ಉಂಟಾಗುವ ಸಂಭವವಿತ್ತು. ಪ್ರಶ್ನಿತ ಸರ್ಕಾರಿ ಆದೇಶದ ಕಛೇರಿ ಪ್ರತಿಯಲ್ಲಿ ಪ್ರತಿ ಚದರ ಅಡಿಗೆ ಎಂದು ನಮೂದಿಸಿದ್ದು, ರವಾನೆಯಾಗಿರುವ ಮೂಲ ಪ್ರತಿಯಲ್ಲಿ ಪ್ರತಿ ಚದರ ಮೀಟರ್‌ಗೆ ಎಂದು ನಮೂದಿಸಿರುವುದು ಮತ್ತು ಕಡತದ ಟಿಪ್ಪಣಿ ಹಾಳೆಗಳನ್ನು ಹರಿದು ಹಾಕಿರುವುದನ್ನು ಗಮನಿಸಲಾಗಿದೆ. ಈ ದುರ್ನಡತೆಯು ವಿಷಯ ನಿರ್ವಾಹಕ, ಶಾಖಾಧಿಕಾರಿ/ಅಧೀನ ಕಾರ್ಯದರ್ಶಿ ಇವರುಗಳ ಪಾತ್ರವಿಲ್ಲದೆ ನಡೆದಿರುತ್ತದೆ ಎಂಬುದನ್ನು ನಂಬಲು ಸಾಧ್ಯವಿಲ್ಲ. ಆದೇಶದ ಕಛೇರಿ ಪ್ರತಿಯಲ್ಲಿ ಆದೇಶದ ಭಾಗದ ಮೂರನೇ ಸಾಲಿನಲ್ಲಿ "ಅಡಿಗೆ" ಎಂಬುದನ್ನು ತದನಂತರ ಬೆರಳಚ್ಚುಗೊಳಿಸಿರುವುದನ್ನು ಸ್ಪಷ್ಟವಾಗಿ ಗೋಚರವಾಗುತ್ತದೆ. ಕಡತದಲ್ಲಿನ ವ್ಯವಹಾರವನ್ನು ಮರೆಮಾಚಲು 2 ಟಿಪ್ಪಣಿ ಹಾಳೆಗಳನ್ನು ಹರಿದು ಹಾಕಲಾಗಿದೆ. ಇಂತಹ ಗುರುತರವಾದ ಆಪಾದನೆಯನ್ನು ರುಜುವಾತುಪಡಿಸಲು ನ್ಯಾಯಾಂಗ ಪ್ರಕರಣಗಳಲ್ಲಿ ಅವಲಂಬಿಸಬೇಕಾಗಿರುವ Degree or Standard of Proofನ್ನು ಇಲಾಖಾ ಶಿಸ್ತಿನ ಪ್ರಕರಣಳಲ್ಲಿ insist ಮಾಡುವ ಅಗತ್ಯವಿರುವುದಿಲ್ಲ. ಮೇಲ್ನೋಟಕ್ಕೆ ಈ ದುರ್ನಡತೆಯು ಸ್ಪಷ್ಟವಾಗಿ ಆಪಾದಿತರ ಮೇಲೆ ಬೆರಳನ್ನು ತೋರಿಸುತ್ತದೆ.

ನಗರಾಭಿವೃದ್ಧಿ ಇಲಾಖೆಯು ಈ ಪ್ರಕರಣ ಬೆಳಕಿಗೆ ಬಂದ ನಂತರ ಆದೇಶ ದಿನಾಂಕ:3.1.2003ನ್ನು ಹೊರಡಿಸಿ ಪ್ರಶ್ನಿತ ಜಮೀನನ್ನು ಕೊಂಡುಕೊಂಡಿರುವ ವ್ಯಕ್ತಿಯಿಂದ ಬಾಕಿ ಹಣವನ್ನು ವಸೂಲಿ ಮಾಡಲು ಆದೇಶಿಸಿರುತ್ತದೆ. ಈ ವ್ಯತ್ಯಾಸದ ಹಣವನ್ನು ಪಾತಿ ಮಾಡದಿದ್ದಲ್ಲಿ ನಿವೇಶನ ಮಂಜೂರಾತಿಯನ್ನು ರದ್ದುಗೊಳಿಸಲು ಸೂಚಿಸಿರುತ್ತದೆ. ಸಾಮಾನ್ಯವಾಗಿ ಶುದ್ಧ ಪ್ರತಿಯನ್ನು ಅಧೀನ ಕಾರ್ಯದರ್ಶಿಯವರು ಸಹಿ ಮಾಡಿದ ನಂತರ ಶಾಖೆಗೆ ಪದ್ಧತಿಯ ಪ್ರಕಾರ ರವಾನಿಸಲು ವಾಪಸಾಗುತ್ತದೆ. ಪ್ರಕರಣದ ಈ ದುರ್ನಡತೆಯ ಬಗ್ಗೆ ಹೆಚ್ಚಿನ ಗುಮಾನಿ ಶಾಖಾ ಸಿಬ್ಬಂದಿಯ ಮೇಲೆ ತೋರುತ್ತದೆಯಾದರೂ ಶಾಖೆಯ ಮೇಲ್ವಿಚಾರಣಾ ಹಂತದಲ್ಲಿನ ಸರ್ಕಾರದ ಅಧೀನ ಕಾರ್ಯದರ್ಶಿಯವರ, ಶಾಖಾಧಿಕಾರಿಯವರ ವಾಬ್ದಾರಿಯು ಕಡಿಮೆ ಆಗುವುದಿಲ್ಲ. ಹಾಗೂ ಆರೋಪಿತರುಗಳು ತಮ್ಮ ಲಿಖಿತ ಉತ್ತರಗಳೊಂದಿಗೆ ಪುಷ್ಠೀಕರಿಸುಂತಹ ಯಾವುದೇ ದಾಖಲೆಗಳನ್ನು ಸಲ್ಲಿಸಿರುವುದಿಲ್ಲ. ಈ ಎಲ್ಲಾ ಅಂಶಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಆರೋಪಿತರುಗಳ ಮೇಲಿನ ಆರೋಪ ಸಾಬೀತಾಗಿಲ್ಲವೆಂಬ ವಿಚಾರಣಾದಿಕಾರಿಗಳ ನಿರ್ಣಯವನ್ನು ಒಪ್ಪಲು ಸಾಧ್ಯವಿಲ್ಲ. ಆದ್ದರಿಂದ ವಿಚಾರಣಾ ವರದಿಯಲ್ಲಿನ ಆರೋಪವು ಸಾಬೀತಾಗಿಲ್ಲವೆಂಬ ನಿರ್ಣಯವನ್ನು ಒಪ್ಪದೆ ಆರೋಪವು ಸಾಬೀತಾಗಿದೆ ಎಂಬ ನಿಲುವು ತಳೆದು ದಂಡನೆ ವಿಧಿಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 19 ಎಸ್‌ಇಎನ್ 2004, ಬೆಂಗಳೂರು, ದಿನಾಂಕ: 26ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಈ ಪ್ರಕರಣದ ಆರೋಪಿತರುಗಳಿಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಆದೇಶಿಸುತ್ತದೆ.

(1) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iv-ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಡಿ.ಬಿ. ಗಣಾಚಾರಿ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರಿಗೆ ಈ ಕೆಳಗಿನಂತೆ ದಂಡನೆ ವಿಧಿಸುತ್ತದೆ.

(ಅ) ಅವರ ವೇತನ ಶ್ರೇಣಿ ರೂ.7400-13120 ರಲ್ಲಿ ಹಾಲಿ ಪಡೆಯುತ್ತಿರುವ ರೂ.9060 ರಿಂದ 2 ಹಂತ ಕೆಳಗೆ ಅಂದರೆ ರೂ.8540ಕ್ಕೆ ಸಂಚಿತ ಪರಿಣಾಮ ಬೀರುವಂತೆ ಇಳಿಸುತ್ತದೆ.

(ಆ) ಅವರ ಮುಂಬಡ್ತಿಯನ್ನು ಅವರು ಮುಂದಿನ ವಾರ್ಷಿಕ ವೇತನ ಬಡ್ತಿ ಗಳಿಸುವವರೆಗೆ ತಡೆ ಹಿಡಿಯಲಾಗಿದೆ.

(ಇ) ಈ ದಂಡನೆಯಿಂದ ಅವರ ವಾರ್ಷಿಕ ವೇತನ ಬಡ್ತಿಯ ದಿನಾಂಕ ಮುಂದೂಡಲ್ಪಡುವುದಿಲ್ಲ.

(2) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8 (iii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ

(i) ಶ್ರೀ ಎಸ್.ಆರ್. ಹಿರೇಮಠ್, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರ ಮುಂದಿನ 2 (ಎರಡು) ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ (with Cumulative effect) ತಡೆಹಿಡಿಯಬೇಕೆಂದು ಹಾಗೂ

(ii) ಶ್ರೀ ಜಿ. ಮುನಿರಾಜಪ್ಪ, ಹಿರಿಯ ಸಹಾಯಕರು, ಕರ್ನಾಟಕ ಸರ್ಕಾರದ ಸಚಿವಾಲಯ ಅವರ ಮುಂದಿನ 2 (ಎರಡು) ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ (with Cumulative effect) ತಡೆಹಿಡಿಯಬೇಕೆಂದು ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 981

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ವಿ.ಎಫ್. ಕೆಳಗೇರಿ, ಮಾಜಿ ಸಿಪಿಸಿ-1460 ರವರು, ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ ಇವರ ಆದೇಶ ಸಂಖ್ಯೆ:ಪನ್ನಿ/2/88, ಓಬಿ ಸಂಖ್ಯೆ: 1188/88 ದಿನಾಂಕ:17/22.8.1988.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ:ಅಪೀಲು/100/88, ದಿನಾಂಕ: 19.12.1988.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 19.8.1999 ಮತ್ತು 9.12.1999.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/6/34/ 99-2000, ದಿನಾಂಕ:16.8.2000.
5. ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಅರ್ಜಿ ಸಂಖ್ಯೆ:966/1989, ದಿನಾಂಕ:6.10.1989.

**ಪ್ರಸ್ತಾವನೆ:**

ಶ್ರೀ ವಿ.ಎಫ್. ಕೆಳಗೇರಿ, ಸಿಪಿಸಿ-1460, ಸೌದತ್ತಿ ಪೊಲೀಸ್ ಠಾಣೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**1. ದೋಷರೋಪಣೆ:**

"You CPC-1460 V.F.Kalgeri of Saundatti P.S.remained unauthorisedly absent for duty from 8.1.87 to 17.4.87 and from 13.5.87 till to date and appeared before S.P.Beigaum after issue of a Desertor Notice on 27.11.87 and on posting to control room. Belgaum again absented from 13.5.87.

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:17/22.8.1988ರ ಆದೇಶದಲ್ಲಿ ಅರ್ಜಿದಾರರನ್ನು ಕಡ್ಡಾಯ ನಿವೃತ್ತಿಗೊಳಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಬೆಳಗಾವಿ ಇವರು ಮೇಲ್ಮನವಿಯನ್ನು ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯಲ್ಲಿ ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:19.12.1988ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಲ್ಲಿಸಿದ್ದು, ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ:966/1989ರ ದಿನಾಂಕ:6.10.1989ರಲ್ಲಿ ಅರ್ಜಿದಾರರು ಸಲ್ಲಿಸಿದ ಅರ್ಜಿಯನ್ನು ವಜಾಗೊಳಿಸಿದೆ. ಈ ಎಲ್ಲಾ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿದಾರರು ಗೈರುಹಾಜರಿ ಆಗಿರುವುದನ್ನು ಪರಿಗಣಿಸಿ, ಅರ್ಜಿದಾರರು ಸಲ್ಲಿಸಿರುವ ಅರ್ಜಿ ಸಂಖ್ಯೆ:966/89 ಅನ್ನು ವಜಾಗೊಳಿಸಿದೆ. ನ್ಯಾಯ ಮಂಡಳಿಯ ಆದೇಶದ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣೆ ಮೇಲ್ಮನವಿ ಅರ್ಜಿ ಸಲ್ಲಿಸಿದ್ದು, ನ್ಯಾಯಾಲಯದಲ್ಲಿ ಅರ್ಜಿದಾರರ ಆರೋಪ ಸಾಬೀತಾಗಿರುವ ಕಾರಣ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 201 ಪೊಸಿಅ 1999, ಬೆಂಗಳೂರು, ದಿನಾಂಕ: 24ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವಿ.ಎಫ್. ಕೆಳಗೇರಿ, ಮಾಜಿ ಸಿಪಿಸಿ-1460, ಬೆಳಗಾವಿ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:19.8.1999 ಹಾಗೂ 9.12.1999ರ ಪರಿಷ್ಕರಣ ಮೇಲ್ಮನವಿ ಅರ್ಜಿಗಳನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಪಿ.ಆರ್. 982

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಎಂ. ಪಾಷಾ, ಸಿಬಿಐ, ಪೂರ್ವ ವೃತ್ತ ರಾಯಚೂರು ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ:ಸಿಬಿ/5/26/2005-06, ದಿನಾಂಕ:14.10.2005.
2. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:18.1.2006.
3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ/5/25/2003-04 ದಿನಾಂಕ:28.2.2006.

**ಪ್ರಸ್ತಾವನೆ:**

ಶ್ರೀ ಎಂ. ಪಾಷಾ, ಸಿಪಿಐ, ಪೂರ್ವ ವೃತ್ತ, ರಾಯಚೂರು ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**1. ದೋಷರೋಪಣೆ:**

"ನೀವು ದಿನಾಂಕ: 9.6.1999 ರಿಂದ 13.6.2000ರ ವರೆಗೆ ಪಿಎಸ್‌ಐ ಆಗಿ ಬೆಂಗಳೂರು ನಗರದ ಯಶವಂತಪುರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಮೊ.ಸಂ.332/99ರ ಪ್ರಕರಣದಲ್ಲಿ, ಒಂದು ವರ್ಷವಾದರೂ ತನಿಖೆಯನ್ನು ಸರಿಯಾಗಿ ನಿರ್ವಹಿಸದೆ, ಮೂಲ ದಾಖಲಾತಿಗಳನ್ನು ಸಂಗ್ರಹಿಸದೆ, ಕರ್ತವ್ಯ ನಿಷ್ಠೆಯನ್ನು ಕೋರದೆ, ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನದಿಂದ ಕರ್ತವ್ಯ ಲೋಪವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:14.10.2005ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗದಂತೆ ಎರಡು ವರ್ಷಗಳ ಅವಧಿಗೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಪ್ರಕರಣವನ್ನು ದಾಖಲಿಸಿ, ಮುಂದಿನ ಯಾವುದೇ ಕ್ರಮ ಕೈಗೊಳ್ಳದಿರುವುದು, ಪಂಚನಾಮೆ ಜರುಗಿಸಿದ ಬಗ್ಗೆ ಆಗಲಿ, ಅಥವಾ ದಾಖಲಾತಿಗಳನ್ನು ಒದಗಿಸುವ ಬಗ್ಗೆ ಆಗಲಿ ಮಾಡದೇ, ಕರ್ತವ್ಯದಲ್ಲಿ ವಿಫಲರಾಗಿರುವುದು ಹಾಗೂ ಆರೋಪಿಯನ್ನು ಪತ್ತೆ ಹಚ್ಚಿ, ದಸ್ತಗಿರಿ ಮಾಡುವಲ್ಲಿ ವಿಫಲರಾಗಿರುವುದು ಸಿಬಿಐ ರವರ ವರದಿಯಿಂದಲೂ ಸಾಬೀತಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 119 ಪೊಸಿಇ 2006, ಬೆಂಗಳೂರು, ದಿನಾಂಕ: 22ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ. ಪಾಷಾ, ಸಿಬಿಐ, ಪೂರ್ವ ವೃತ್ತ, ರಾಯಚೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:18.1.2006ರ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಬಸವರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 983

## ಆರ್ಥಿಕ ಸಚಿವಾಲಯ

**ವಿಷಯ:** ಸರ್ಕಾರದ ವೆಚ್ಚಗಳಲ್ಲಿ ಆರ್ಥಿಕ ಮಿತವ್ಯಯ ಕ್ರಮಗಳ ಪಾಲನೆ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ ಆಇ 3 ಬಿಇಎಂ 2001, ದಿನಾಂಕ 17.10.2001.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಅಧಿಕಾರಿಗಳನ್ನು ತರಬೇತಿಗಾಗಿ ಹೊರರಾಜ್ಯಗಳಿಗೆ ನಿಯೋಜಿಸುವಾಗ ಆರ್ಥಿಕ ಇಲಾಖೆಯ ಪೂರ್ವಾನುಮತಿ ತಪ್ಪದೇ ಪಡೆಯಬೇಕು ಮತ್ತು ಒಂದೇ ಬಾರಿಗೆ ಇಬ್ಬರಿಗಿಂತ ಹೆಚ್ಚಿನ ಅಧಿಕಾರಿಗಳು/ನೌಕರರನ್ನು ತರಬೇತಿಗಾಗಿ ನಿಯೋಜಿಸುವುದನ್ನು ಪ್ರೋತ್ಸಾಹಿಸಬಾರದೆಂದು ತಿಳಿಸಲಾಗಿತ್ತು.

ಈ ಆದೇಶವನ್ನು ಸಡಿಲಗೊಳಿಸುವ ಅವಶ್ಯಕತೆಯನ್ನು ಸರ್ಕಾರ ಮನಗಂಡು ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 2 ಬಿಇಎಂ 2006, ಬೆಂಗಳೂರು, ದಿನಾಂಕ: 14ನೇ ಜೂನ್ 2006**

ದೇಶದ ಒಳಗೆ ನಡೆಯುವ ತರಬೇತಿ ಕಾರ್ಯಕ್ರಮಕ್ಕೆ ಸಂಬಂಧಿಸಿದಂತೆ ಪ್ರತಿ ಪ್ರಶಿಕ್ಷಣಾರ್ಥಿಗೆ ರೂ.50,000/- ಗಳಿಗಿಂತ ಕಡಿಮೆ ನೋಂದಣಿ ಶುಲ್ಕವಿರುವ ಪ್ರಕರಣಗಳಲ್ಲಿ ಅಧಿಕಾರಿಗಳನ್ನು ತರಬೇತಿಗೆ ನಿಯೋಜಿಸಲು ಆರ್ಥಿಕ ಇಲಾಖೆಯ ಪೂರ್ವಾನುಮತಿಯ ಅವಶ್ಯಕತೆ ಇರುವುದಿಲ್ಲ. ಸಂಬಂಧಿಸಿದ ಇಲಾಖೆಯ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿಗಳು ಆಯವ್ಯಯ ಅವಕಾಶದ ಲಭ್ಯತೆಗೆ ಒಳಪಟ್ಟು ಅಂತಹ ಪ್ರಕರಣಗಳನ್ನು ನಿರ್ಧರಿಸಲು ಮತ್ತು ಅನುಮೋದಿಸಲು ಅಧಿಕಾರ ಪಡೆದಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಶಾಮರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಎಫ್.ಆರ್. ಮತ್ತು ಬಿ.ಸಿ.ಸಿ.)

## FINANCE SECRETARIAT

**Sub:** Austerity Measures in Government Expenditure.

**Read:** Government Order No. FD 3 BEM 2001 dated 17.10.2001.

**Preamble:-**

In the Government Order read above, it is indicated that deputing officers outside the State for training shall be strictly only with the prior concurrence of the Finance Department and deputing for training more than two officers / officials at a tie shall be discouraged.

Now the Government feels that there is necessity to relax this order and hence this Order.

**Government Order No. FD BEM 2006, Bangalore, Dated: 14th June 2006**

Prior concurrence of Finance department is not necessary for Deputation for any training programme within the Country in the cases in which registration fee per participant is less than Rs. 50,000-00. The Principal Secretaries / Secretaries of the concerned Department shall have powers to decide and approve such cases subject to availability of Budget Provision.

By Order and in the name of the Governor of Karnataka,

**C. SHAMA RAO**

P.R. 987

Under Secretary to Government,

Finance Department (F.R. & B.C.C.)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ನೀರಾವರಿ ಯೋಜನಾ ವಲಯ, ಗುಲ್ಬರ್ಗಾ ಕಾಡಾ ಪ್ರಾಧಿಕಾರಕ್ಕೆ ಸಹಕಾರ ಸಂಘಗಳ ಹಿರಿಯ ನಿರೀಕ್ಷಕರ ಹುದ್ದೆಗಳನ್ನು ಸ್ಥಳಾಂತರಿಸುವ ಬಗ್ಗೆ-ಆದೇಶ.

**ಓದಲಾಗಿದೆ:**

1. ನೀರಾವರಿ ಯೋಜನಾ ವಲಯ, ಗುಲ್ಬರ್ಗಾ ಕಾಡಾ ಆಡಳಿತಾಧಿಕಾರಿಯವರ ಪತ್ರ ಸಂಖ್ಯೆ:ಕಾಡಾ/ನೀಯೋವ/ಸಿಬ್ಬಂದಿ/5/01 02/1100, ದಿನಾಂಕ:29.1.2005.
2. ಸರ್ಕಾರದ ಅಧಿಸೂಚನೆ ಸಂಖ್ಯೆ:ಐಡಿ 28 ಸಿಎಎಂ 93, ದಿನಾಂಕ:12.3.1996.
3. ತುಂಗಭದ್ರಾ ಕಾಡಾ ಆಡಳಿತಾಧಿಕಾರಿಯವರ ಪತ್ರ ಸಂಖ್ಯೆ:ಟಿಬಿಪಿ/ಕಾಡಾ/ಆಡಳಿತ-1/72/05-06/635, ದಿನಾಂಕ: 6.7.2005.

**ಪ್ರಸ್ತಾವನೆ:**

ಮೇಲಿನ ಕ್ರ.ಸಂ.(1)ರಲ್ಲಿ ಓದಲಾದ ಗುಲ್ಬರ್ಗಾ ಕಾಡಾ ಆಡಳಿತಾಧಿಕಾರಿಯವರ ಪತ್ರದಲ್ಲಿ ಪ್ರಾಧಿಕಾರದ ಪಿ.ಐ.ಎಂ. ಅನುಷ್ಠಾನಗೊಳಿಸಲು ನಾಲ್ಕು ಸಹಕಾರ ಸಂಘಗಳ ಹಿರಿಯ ನಿರೀಕ್ಷಕರ ಹುದ್ದೆಗಳು ಅಗತ್ಯವಾಗಿದೆಯೆಂದು ಸದರಿ ನಾಲ್ಕು ಹುದ್ದೆಗಳನ್ನು ಸೃಷ್ಟಿಸಿ ಸಹಕಾರ ಇಲಾಖೆಯಿಂದ ನಿಯೋಜನೆ ಮೇಲೆ ಭರ್ತಿ ಮಾಡುವಂತೆ ಸರ್ಕಾರವನ್ನು ಕೋರಿದ್ದರು. ಆರ್ಥಿಕ ಮಿತವ್ಯಯ ದೃಷ್ಟಿಯಿಂದ ಹೊಸ ಹುದ್ದೆ ಸೃಷ್ಟಿಸಲು ಸಾಧ್ಯವಿಲ್ಲದಿದ್ದಲ್ಲಿ ಬೇರೆ ಪ್ರಾಧಿಕಾರಗಳಲ್ಲಿ ಹೆಚ್ಚುವರಿಯಾಗಿ ಹಿರಿಯ ನಿರೀಕ್ಷಕರ ಹುದ್ದೆಗಳು ಇದ್ದರೆ; ಅಲ್ಲಿನ ನಾಲ್ಕು ಹಿರಿಯ ನಿರೀಕ್ಷಕರ ಹುದ್ದೆಗಳನ್ನು ನೀರಾವರಿ ಯೋಜನಾ ವಲಯ, ಗುಲ್ಬರ್ಗಾ ಕಾಡಾ ಪ್ರಾಧಿಕಾರಕ್ಕೆ ಸ್ಥಳಾಂತರಿಸಿಕೊಡಲು ಕೋರಿರುತ್ತಾರೆ.

ಕ್ರ.ಸಂ.(2)ರಲ್ಲಿ ಓದಲಾದ, ತುಂಗಭದ್ರಾ ಕಾಡಾ ಆಡಳಿತಾಧಿಕಾರಿಯವರ ಪತ್ರದಲ್ಲಿ ಪ್ರಾಧಿಕಾರದಲ್ಲಿ ಮಂಜೂರಾದ 7 ಸಹಕಾರ ಸಂಘಗಳ ಹಿರಿಯ ನಿರೀಕ್ಷಕರ ಹುದ್ದೆಗಳಲ್ಲಿ ಒಂದು ಹುದ್ದೆಯನ್ನು ತುಂಗಭದ್ರಾ ಕಾಡಾ ಪ್ರಾಧಿಕಾರಕ್ಕೆ ಸ್ಥಳಾಂತರಿಸಬಹುದೆಂದು ತಿಳಿಸಿದ್ದಾರೆ. ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಲಭ್ಯವಾದ ಒಂದು ಸಹಕಾರ ಸಂಘಗಳ ಹಿರಿಯ ನಿರೀಕ್ಷಕರ ಹುದ್ದೆಯನ್ನು ಸ್ಥಳಾಂತರಿಸಲು ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಬಸಂಇ 20 ಸಿಎಎಂ 2005, ಬೆಂಗಳೂರು, ದಿನಾಂಕ: 26ನೇ ಜೂನ್ 2006**

ಸರ್ಕಾರದ ಅಧಿಸೂಚನೆ ಸಂಖ್ಯೆ:ಐಡಿ 28 ಸಿಎಎಂ 93, ದಿನಾಂಕ:12.3.1996ರಲ್ಲಿ ಪ್ರಕಟಿಸಲಾಗಿರುವ ಕಾಡಾ (ವೃಂದ ಮತ್ತು ನೇಮಕಾತಿ) ನಿಯಮಗಳು 1989ರ ಷೆಡ್ಯೂಲ್-1ರಲ್ಲಿ ತುಂಗಭದ್ರಾ ಕಾಡಾ ಪ್ರಾಧಿಕಾರಕ್ಕೆ ಮಂಜೂರಾದ ಏಳು ಸಹಕಾರ ಸಂಘಗಳ ಹಿರಿಯ ನಿರೀಕ್ಷಕರ ಹುದ್ದೆಗಳಲ್ಲಿ ಒಂದು ಹುದ್ದೆಯನ್ನು ಕಡಿತಗೊಳಿಸಿ ಸದರಿ ಹುದ್ದೆಯನ್ನು ನೀರಾವರಿ ಯೋಜನಾ ವಲಯ, ಗುಲ್ಬರ್ಗಾ ಕಾಡಾ ಪ್ರಾಧಿಕಾರಕ್ಕೆ ಈ ಕೂಡಲೆ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸ್ಥಳಾಂತರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಲೋಇ 162 ಆಕೋ-3/06, ದಿನಾಂಕ:8.6.2006ರಲ್ಲಿ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಂದರ ರಾಜ ಗುಪ್ತ**

ಪಿ.ಆರ್. 988

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಕಾಡಾ).

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಕೆಳದಿ ವಸ್ತು ಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನಾ ಕೇಂದ್ರ, ಕೆಳದಿ, ಸಾಗರ ತಾಲ್ಲೂಕು ಇದನ್ನು ಕುವೆಂಪು ವಿಶ್ವವಿದ್ಯಾನಿಲಯಕ್ಕೆ ವಿಲೀನಗೊಳಿಸುವ ಕುರಿತು.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ:ಸಂಕಇ 144 ಕೆಎಂಯು 2003, ದಿ:23.8.2005
2. ಉಪಕುಲಸಚಿವ, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, ಶಿವಮೊಗ್ಗ ಅವರ ಪತ್ರಸಂಖ್ಯೆ:ಕುವಿ:ಮಾಸಸಿ-2:359:2005-06:4882 ದಿ:26.11.2005.
3. ಸಂ:ಕಾರ್ಯದರ್ಶಿ, ಕೆಳದಿ ವಸ್ತುಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನ ಕೇಂದ್ರ, ಕೆಳದಿ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪತ್ರ ಸಂಖ್ಯೆ: ಕೆಎಂ/16/2005-06/ಸಂಶೋಧನೆ ದಿನಾಂಕ:8.2.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ, ಕೆಳದಿ ವಸ್ತು ಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನಾ ಕೇಂದ್ರವನ್ನು (ಶಿವಮೊಗ್ಗ ಜಿಲ್ಲೆಯ) ಅದರಲ್ಲಿ ನಮೂದಿಸಿರುವ ಷರತ್ತಿಗೊಳಪಟ್ಟು, ಕುವೆಂಪು ವಿಶ್ವವಿದ್ಯಾನಿಲಯಕ್ಕೆ ವಿಲೀನಗೊಳಿಸಲಾಯಿತು. ಈ ಷರತ್ತುಗಳ ಪೈಕಿ ಕ್ರಮ ಸಂಖ್ಯೆ 5 ರಲ್ಲಿ "ಕೆಳದಿ ವಸ್ತು ಸಂಗ್ರಹಾಲಯ ಮತ್ತು ಸಂಶೋಧನಾ ಸಂಸ್ಥೆ ಶಿವಮೊಗ್ಗ ಜಿಲ್ಲೆ ಇದನ್ನು ಕುವೆಂಪು ವಿಶ್ವ ವಿದ್ಯಾಲಯಕ್ಕೆ ವಿಲೀನಗೊಳಿಸುವುದರಿಂದ ಉದ್ಭವಿಸುವ ಹೆಚ್ಚುವರಿ ವೆಚ್ಚವನ್ನು ವಿಶ್ವ ವಿದ್ಯಾಲಯವೇ ಭರಿಸತಕ್ಕದ್ದು" ಎಂಬ ಷರತ್ತನ್ನು ವಿಧಿಸಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಉಪಕುಲಸಚಿವ, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, ಶಿವಮೊಗ್ಗ, ಇವರು ಕೆಳದಿ ವಸ್ತು ಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನಾ ಕೇಂದ್ರವನ್ನು ಕುವೆಂಪು ವಿಶ್ವವಿದ್ಯಾಲಯದೊಂದಿಗೆ ವಿಲೀನಗೊಳಿಸುವ ವಿಷಯವನ್ನು ಕುರಿತು ದಿನಾಂಕ:10.10.2005 ರಂದು ನಡೆದ ಸಿಂಡಿಕೇಟ್ ಸಭೆಯಲ್ಲಿ ಚರ್ಚಿಸಲಾಗಿ, ಕೆಳದಿ ವಸ್ತು ಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನಾ ಕೇಂದ್ರಕ್ಕೆ ಸರ್ಕಾರವು ಪ್ರತಿ ವರ್ಷ ನೀಡಲಾಗುತ್ತಿರುವ ಅನುದಾನವನ್ನು ಕುವೆಂಪು ವಿಶ್ವವಿದ್ಯಾನಿಲಯಕ್ಕೆ ನೀಡಬೇಕೆಂದು ನಿರ್ಣಯಿಸಿರುವುದಾಗಿ ತಿಳಿಸಿ ಅದರಂತೆ ಸರ್ಕಾರದ ಆದೇಶ ಹೊರಡಿಸಲು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಸಂಕಇ 239 ಕೆಎಂಯು 2005, ಬೆಂಗಳೂರು, ದಿನಾಂಕ: 27ನೇ ಜೂನ್ 2006**

ಸರ್ಕಾರದ ಆದೇಶ ಸಂಖ್ಯೆ: ಸಂಕಇ 144 ಕೆಎಂಯು 2003 ದಿನಾಂಕ: 23.8.2005ರ ಆದೇಶವನ್ನು ಭಾಗಶಃ ಮಾರ್ಪಡಿಸಿ, ಸದರಿ ಆದೇಶದಲ್ಲಿ ವಿಧಿಸಿರುವ 5ನೇ ಷರತ್ತನ್ನು ಈ ಕೆಳಗಿನಂತೆ ಪರಿಷ್ಕರಿಸಿ ಆದೇಶಿಸಿದೆ.

"ಕೆಳದಿ ವಸ್ತು ಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನಾ ಕೇಂದ್ರ, ಕೆಳದಿ, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಇದನ್ನು ಕುವೆಂಪು ವಿಶ್ವವಿದ್ಯಾನಿಲಯದಡಿಯಲ್ಲಿ ವಿಲೀನಕ್ಕೆ ಸಂಬಂಧಿಸಿದಂತೆ ಕನ್ನಡ ಮತ್ತು ಸಂಸ್ಕೃತಿ, ಹಾಗೂ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಪ್ರತಿ ವರ್ಷ ರೂ.7.63ಲಕ್ಷಗಳನ್ನು ಮುಂದಿನ ಹತ್ತು ವರ್ಷಗಳು ಕುವೆಂಪು ವಿಶ್ವ ವಿದ್ಯಾನಿಲಯಕ್ಕೆ ನೀಡಲು ಒಪ್ಪಿರುತ್ತದೆ. ಹತ್ತು ವರ್ಷಗಳ ನಂತರ ಈ ಬಗ್ಗೆ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯು ಈ ಷರತ್ತನ್ನು ಪುನಃ ಪರಿಶೀಲಿಸಿ ತೀರ್ಮಾನಿಸಲು ಸೂಚಿಸಲಾಗಿದೆ."

ಸರ್ಕಾರಿ ಆದೇಶ ಸಂಖ್ಯೆ ಸಂಕಇ 144 ಕೆಂಯು 203 ದಿನಾಂಕ: 23.8.2005ರ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 838 ವೆಚ್ಚ-5/2006 ದಿನಾಂಕ: 30.5.2006ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 989

**ಕೆ. ಸಾಂಬಶಿವಂ**

ಪೀಠಾಧಿಕಾರಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಆಡಳಿತ ಕನ್ನಡ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಸ್.ಎಂ.ಬೇವೂರ್, ಕೆಎಎಸ್ ಅಧಿಕಾರಿ ಮತ್ತು ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ಸೇವೆಯಲ್ಲಿರುವ ಆಪಾದಿತರಿಗೆ ದಂಡನೆ ವಿಧಿಸುವ ಬಗ್ಗೆ ಆದೇಶ.

**ಓದಲಾಗಿದೆ:-**

1. ಸರ್ಕಾರದ ಆದೇಶ ಕ್ರಮಾಂಕ:ಸಿಆಸುಇ 112 ಎಸ್ಇಎನ್ 2000 ದಿನಾಂಕ:04.04.01.
2. ವಿಚಾರಣಾ ವರದಿ ಕ್ರಮಾಂಕ:ಲೋಕ್/ಎಆರ್ಇ-1/ಇಎನ್‌ಕ್ಯೂ-109/02-03 ದಿನಾಂಕ: 31.01.04.
3. ಸನ್ಮಾನ್ಯ ಉಪ ಲೋಕಾಯುಕ್ತರ ಪತ್ರ ಕ್ರಮಾಂಕ:ಲೋಕ್/ಎಆರ್ಇ-1/ಇಎನ್‌ಕ್ಯೂ-109/02-03 ದಿನಾಂಕ:26.07.05.
4. ನೋಟೀಸ್ ಕ್ರಮಾಂಕ:ಸಿಆಸುಇ 112 ಎಸ್ಇಎನ್ 2000 ದಿನಾಂಕ:16/17.08.05.
5. ಶ್ರೀ ಎಸ್.ಎಂ.ಬೇವೂರ್, ಕೆಎಎಸ್ ಅಧಿಕಾರಿ ಅವರ ಲಿಖಿತ ಮನವಿ ದಿನಾಂಕ:15.09.05.

**ಪ್ರಸ್ತಾವನೆ:**

ಬೀದರ್ ಜಿಲ್ಲಾ ಪಂಚಾಯತ್‌ನಲ್ಲಿ ಶ್ರೀ ಎಸ್.ಎಂ.ಬೇವೂರ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಸಹಾಯಕ ಕಾರ್ಯದರ್ಶಿಯಾಗಿ, ಮುಖ್ಯ ಲೆಕ್ಕಾಧಿಕಾರಿ ಹುದ್ದೆಯಲ್ಲಿ ಶ್ರೀ ಗುಂಡಪ್ಪ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಕಛೇರಿ, ಬೀದರ್ ಇಲ್ಲಿ ಸಹಾಯಕ ಜಿಲ್ಲಾ ಆರೋಗ್ಯಾಧಿಕಾರಿಯಾಗಿ ಶ್ರೀಮತಿ ಪಿ.ವಸುಂದರಾ ದೇವಿ ಅವರು, ಅಧೀಕ್ಷಕರ ಹುದ್ದೆಯಲ್ಲಿ ಶ್ರೀ ಖಲೀಲ್ ಅಹಮದ್ ಅವರು, ಸರ್ವೀಸ್ ಇಂಜಿನಿಯರ್ ಹುದ್ದೆಯಲ್ಲಿ ಶ್ರೀ ದುಂಡಪ್ಪ ಅವರು, ಪ್ರಥಮ ದರ್ಜೆ ಸಹಾಯಕ ಮತ್ತು ಸ್ಟೋರ್ ಕೀಪರ್ ಹುದ್ದೆಯಲ್ಲಿ ಶ್ರೀ ಮಾಣಿಕ್‌ರಾವ್ ಖಾಟೆ, ಶ್ರೀ ಬಸವರಾಜ ಬರಶೆಟ್ಟಿ, ಶ್ರೀ ರಘುನಾಥರಾವ್, ಶ್ರೀ ಜನಾರ್ಧನ್ ಅವರುಗಳು ಕಾರ್ಯನಿರ್ವಹಿಸುತ್ತಿದ್ದಾಗ 1991-92, 93-94 ಮತ್ತು 94-95ನೇ ಸಾಲಿನಲ್ಲಿ ಬೀದರ್ ಜಿಲ್ಲಾ ಪಂಚಾಯತ್ ವ್ಯಾಪ್ತಿಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಕಛೇರಿಯಲ್ಲಿ ನಡೆದಿದೆ ಎನ್ನಲಾಗಿದ್ದ ಭಾರಿ ಪ್ರಮಾಣದ ಹಣಕಾಸಿನ ಅವ್ಯವಹಾರಗಳ ಆರೋಪಕ್ಕಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14-ಎ ರನ್ವಯ ಮೇಲ್ಕಂಡ ಆಪಾದಿತರುಗಳ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿ:04.04.01ರ ಸರ್ಕಾರಿ ಆದೇಶದಲ್ಲಿ ಸನ್ಮಾನ್ಯ ಉಪ ಲೋಕಾಯುಕ್ತರ ಮೂಲಕ ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆ ನಡೆಸಲು ಅವರಿಗೆ ವಹಿಸಿ ಆದೇಶಿಸಲಾಯಿತು. ಅವರಿಂದ ವಿಚಾರಣಾಧಿಕಾರಿಯಾಗಿ ನೇಮಕಗೊಂಡ ಹೆಚ್ಚುವರಿ ನಿಬಂಧಕರು, ವಿಚಾರಣೆಗಳು-1, ಕರ್ನಾಟಕ ಲೋಕಾಯುಕ್ತ ಕಛೇರಿ ಅವರು ವಿಚಾರಣೆ ನಡೆಸಿ ಮೇಲೆ (2)ರಲ್ಲಿ ಓದಲಾದ ವಿಚಾರಣಾ ವರದಿಯನ್ನು ಸನ್ಮಾನ್ಯ ಉಪ ಲೋಕಾಯುಕ್ತರಿಗೆ ಸಲ್ಲಿಸಿ ಆರೋಪ ಕುರಿತು ಈ ಕೆಳಕಂಡ ನಿರ್ಣಯ ನೀಡಿರುತ್ತಾರೆ.

ಬೀದರ್ ಜಿಲ್ಲಾ ಪಂಚಾಯತ್ ವ್ಯಾಪ್ತಿಯ ಜಿಲ್ಲಾ ಅರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಕಛೇರಿಯಲ್ಲಿ 1991-92, 93-94 ಮತ್ತು 94-95ನೇ ಸಾಲಿನಲ್ಲಿ ನಡೆದಿರುವ ಹಣಕಾಸಿನ ಅವ್ಯವಹಾರದ ಸಂಬಂಧ ಒಟ್ಟು 16 ಆರೋಪಗಳನ್ನು ಮಾಡಿರುತ್ತಾರೆ. ಶ್ರೀ ಎಸ್.ಎಂ.ಬೇವೂರ್ ಅವರು ಬೀದರ್ ಜಿಲ್ಲಾ ಪಂಚಾಯತ್‌ನಲ್ಲಿ ಸಹಾಯಕ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಬೀದರ್ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ನಡೆದ ಹಣ ದುರುಪಯೋಗದ ಕುರಿತಂತೆ ಅಲ್ಲಿ ಪ್ರಥಮ ದರ್ಜೆ ಸಹಾಯಕ ಮತ್ತು ಸ್ಟೋರ್ ಕೀಪರ್ ಆಗಿದ್ದ ಶ್ರೀ ಬಸವರಾಜ ಬರಶೆಟ್ಟಿ ವಿರುದ್ಧ ಕ್ರಮ ತೆಗೆದುಕೊಳ್ಳಲು ಆದೇಶಿಸಿದ್ದರೂ ಸಹ ಯಾವುದೇ ಕ್ರಮ ತೆಗೆದುಕೊಂಡಿಲ್ಲವೆಂಬ ವಿಷಯದಲ್ಲಿ ಅವರ ವಿರುದ್ಧ ಮಾಡಲಾದ 16ನೇ ಆರೋಪ ಸಾಬೀತಾಗಿದೆ. ಶ್ರೀಮತಿ ಪಿ.ವಸುಂದರಾ ದೇವಿ, ಸಹಾಯಕ ಜಿಲ್ಲಾ ಆರೋಗ್ಯಾಧಿಕಾರಿ ಅವರ ವಿರುದ್ಧ ಮಾಡಲಾದ 12 ಪೆಡೆಸ್ಟ್ರಿಯಲ್ ಫ್ಯಾನ್ ಮತ್ತು ಏರ್‌ಕೂಲರನ್ನು

ಸ್ವೀಕರಿಸದೇ ಇದ್ದರೂ ಸಹ ರೂ.0.80 ಲಕ್ಷ ಖರ್ಚಾಗಿದೆಯೆಂದು ತೋರಿಸಿರುವ 12ನೇ ಆರೋಪವು ಸಾಬೀತಾಗಿಲ್ಲ. ಶ್ರೀ ದುಂಡಪ್ಪ, ಸರ್ವೀಸ್ ಇಂಜಿನಿಯರ್ ಅವರ ವಿರುದ್ಧ 5ನೇ ಆರೋಪ ಮಾಡಲಾಗಿದ್ದು, 5 ವಾಹನ ರಿಪೇರಿ ಸಂಬಂಧ ಸರಿಯಾಗಿ ದುರಸ್ತಿ ಮಾಡದೇ ಇದ್ದರೂ ಪ್ರಮಾಣ ಪತ್ರ ನೀಡಿ ರೂ.35,000/-ಗಳು ಆರ್ಥಿಕ ನಷ್ಟ ಉಂಟು ಮಾಡಿದ್ದಾರೆಂಬ ಆರೋಪ ಸಾಬೀತಾಗಿಲ್ಲ. ಶ್ರೀ ಮಾಣಿಕ್‌ರಾವ್ ಖಾಟೆ, ಪ್ರಥಮ ದರ್ಜೆ ಸಹಾಯಕ ಮತ್ತು ಸ್ಟೋರ್ ಕೀಪರ್ ಅವರ ವಿರುದ್ಧ 4ನೇ ಆರೋಪ ಮಾಡಲಾಗಿದ್ದು, 4 ವಾಹನಗಳ ರಿಪೇರಿಗಾಗಿ ಕೊಟೇಷನ್ ಕರೆಯುವಲ್ಲಿ ನಿಯಮಗಳನ್ನು ಪಾಲಿಸಿರುವುದಿಲ್ಲವೆಂಬ ಆರೋಪವು ಸಾಬೀತಾಗಿಲ್ಲ ಎಂಬ ನಿರ್ಣಯ ನೀಡಿರುತ್ತಾರೆ.

ವಿಚಾರಣಾ ವರದಿಯನ್ನು ಪರಾಮರ್ಶಿಸಿದ ಸನ್ಮಾನ್ಯ ಉಪ ಲೋಕಾಯುಕ್ತರವರು ಮೇಲೆ (3)ರಲ್ಲಿ ಓದಲಾದ ದಿ:26.07.05ರ ಪತ್ರದಲ್ಲಿ ವಿಚಾರಣಾ ವರದಿಯೊಂದಿಗೆ ದಾಖಲೆಗಳನ್ನು ರವಾನಿಸಿರುತ್ತಾರೆ. ವಿಚಾರಣಾ ವರದಿ ಹಾಗೂ ಸನ್ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸನ್ನು ಮೇಲೆ (4)ರಲ್ಲಿ ಓದಲಾದ ದಿ:16/17.08.05ರಂದು ನೋಟೀಸಿನೊಡನೆ ಆರೋಪ ಸಾಬೀತಾದ ಶ್ರೀ ಎಸ್.ಎಂ.ಬೇವೂರ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರಿಗೆ ಒದಗಿಸಿ ಅವುಗಳ ಬಗ್ಗೆ ಏನಾದರೂ ಅಹವಾಲು ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಈ ನೋಟೀಸಿಗೆ ಶ್ರೀ ಎಸ್.ಎಂ.ಬೇವೂರ್ ಅವರು ಮೇಲೆ (5)ರಲ್ಲಿ ಓದಲಾದ ದಿ:15.09.05ರ ಉತ್ತರ ಸಲ್ಲಿಸಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರಕ್ಕೆ ಸಂಬಂಧಿಸಿದಂತೆ ಇದರೊಂದಿಗೆ ತಮಗೆ ಪ್ರತ್ಯಕ್ಷವಾಗಿ ಅಥವಾ ಅಪ್ರತ್ಯಕ್ಷವಾಗಿ ಯಾವುದೇ ಸಂಬಂಧವಿರುವುದಿಲ್ಲ. ಜಿಲ್ಲಾ ಪಂಚಾಯಿತಿಯಲ್ಲಿ ಸಹಾಯಕ ಕಾರ್ಯದರ್ಶಿ ಹುದ್ದೆ ಯಾವುದೇ ಸ್ವಂತ ಅಧಿಕಾರವಿರದ ಹುದ್ದೆಯಾಗಿರುತ್ತದೆ. ಈ ಹುದ್ದೆಯ ಮೇಲೆ ಉಪ ಕಾರ್ಯದರ್ಶಿ, ಮುಖ್ಯ ಲೆಕ್ಕಾಧಿಕಾರಿಗಳು, ಮುಖ್ಯ ಯೋಜನಾಧಿಕಾರಿಗಳು ಮತ್ತು ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳು ಇರುತ್ತಾರೆ. ಯಾವುದೇ ಕ್ರಮ ಜರುಗಿಸಬೇಕಾದರೆ ಜಿಲ್ಲಾ ಪಂಚಾಯತ್ ಸಾಮಾನ್ಯ ಸಭೆಯ ಅನುಮತಿ ಪಡೆದುಕೊಂಡು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಕ್ರಮ ತೆಗೆದುಕೊಂಡಿರುತ್ತಾರೆ. ಪ್ರಸ್ತುತ ವಿಷಯದಲ್ಲಿ ಆರೋಗ್ಯ ಇಲಾಖೆಯಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರ ಕುರಿತು ತನಿಖೆ ನಡೆಸಲು ಒಂದು ಸಮಿತಿಯನ್ನು ರಚಿಸಲಾಗಿತ್ತು. ಸಮಿತಿಯ ಅಭಿಪ್ರಾಯದ ಮೇರೆಗೆ ಆಗಿನ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು ಕ್ರಮ ಕೈಗೊಂಡಿರುತ್ತಾರೆ. ಯಾವುದೋ ಒಂದು ಕಡತ ತಮ್ಮ ಹತ್ತಿರ ದಿ:31.01.97ರಂದು ಬಂದ ಮೇಲೆ ಅದನ್ನು ದಿ:20.02.97ರವರೆಗೆ ತಮ್ಮ ಹತ್ತಿರ ಇಟ್ಟುಕೊಳ್ಳಲಾಗಿದೆ ಎಂದು ಆಪಾದಿಸಿರುತ್ತಾರೆ. ತಮಗೆ ತಿಳಿದಿರುವಂತೆ ಯಾವುದೇ ಕಡತವು ತಮ್ಮ ಹತ್ತಿರ ಇರುವುದಿಲ್ಲ. ಆರೋಗ್ಯ ಇಲಾಖೆಯಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರದ ಬಗ್ಗೆ ಸಂಬಂಧಿಸಿದ ಅಧಿಕಾರಿ/ಸಿಬ್ಬಂದಿಯ ವಿರುದ್ಧ ಕ್ರಮ ತೆಗೆದುಕೊಳ್ಳುವ ಕುರಿತು ಸರ್ಕಾರಕ್ಕೆ ಬರೆದ ಪತ್ರದ ಬಗ್ಗೆಯೂ ವಿಚಾರಣಾಧಿಕಾರಿಗಳು ಗಣನೆಗೆ ತೆಗೆದುಕೊಳ್ಳದೇ ತಮಗೆ ಎಚ್ಚರಿಕೆ (Censure) ನೀಡುವಂತೆ ತಿಳಿಸಿರುವುದು ಸ್ವಾಭಾವಿಕ ನ್ಯಾಯದ ವಿರುದ್ಧವಾಗಿರುತ್ತದೆ. ಆದ್ದರಿಂದ ಮಾನವೀಯ ದೃಷ್ಟಿಯಿಂದ ಮೇಲ್ಕಂಡ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಸನ್ಮಾನ್ಯ ಉಪ ಲೋಕಾಯುಕ್ತರು ಕೊಟ್ಟ ಎಚ್ಚರಿಕೆಯ ಶಿಫಾರಸ್ಸನ್ನು ಕೈಬಿಟ್ಟು ತಮ್ಮನ್ನು ಆರೋಪಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ಶ್ರೀ ಖಲೀಲ್ ಅಹಮದ್, ಅಧೀಕ್ಷಕರು ಇವರು ಸೇವೆಯಿಂದ ನಿವೃತ್ತರಾಗಿರುವುದರಿಂದ ಇವರ ಮೇಲಿನ ಆರೋಪಗಳು Barred by time limitation ಆಗಿರುವುದು ಎಂದು ತಿಳಿಸಿರುವುದರಿಂದ ಇವರಿಗೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ಕ್ರಮ ಕೈಗೊಳ್ಳಲಾಗುತ್ತಿದೆ. ಶ್ರೀ ಗುಂಡಪ್ಪ ಅವರು ದಿ:02.04.04ರಂದು ನಿಧನ ಹೊಂದಿರುವುದರಿಂದ ಹಾಗೂ ಶ್ರೀ ರಘುನಾಥ್‌ರಾವ್ ಅವರು ನಿವೃತ್ತಿ ಹೊಂದಿರುವುದರಿಂದ ಅವರುಗಳಿಗೆ ದಂಡನೆ ವಿಧಿಸಲು ಕ್ರಮ ಕೈಗೊಳ್ಳುವುದಕ್ಕೆ ಸಂಬಂಧಿಸಿದಂತೆ ಕರ್ನಾಟಕ ಲೋಕ ಸೇವಾ ಆಯೋಗದೊಂದಿಗೆ ಸಮಾಲೋಚನೆ ನಡೆಸಿ ಪ್ರತ್ಯೇಕವಾಗಿ ಕ್ರಮ ಕೈಗೊಳ್ಳಲಾಗುತ್ತಿದೆ. ಶ್ರೀ ಬಸವರಾಜ ಬರಶೆಟ್ಟಿ ಮತ್ತು ಶ್ರೀ ಜನಾರ್ಧನ್, ಪ್ರಥಮ ದರ್ಜೆ ಸಹಾಯಕರುಗಳು ಅವರುಗಳಿಗೆ ಸಂಬಂಧಿಸಿದಂತೆ ಪ್ರಕರಣವನ್ನು ಸಚಿವ ಸಂಪುಟದ ಮುಂದೆ ಮಂಡಿಸಿ ಆದೇಶ ಪಡೆಯಲು ಕ್ರಮ ಕೈಗೊಳ್ಳಲಾಗುತ್ತಿದೆ.

ವಿಚಾರಣಾಧಿಕಾರಿಯವರ ವಿಚಾರಣಾ ವರದಿ ಹಾಗೂ ಸನ್ಮಾನ್ಯ ಉಪ ಲೋಕಾಯುಕ್ತರವರ ಶಿಫಾರಸ್ಸನ್ನು ಒಪ್ಪಿಕೊಳ್ಳದೆ ತಮ್ಮನ್ನು ಆರೋಪಮುಕ್ತರನ್ನಾಗಿಸಲು ಶ್ರೀ ಎಸ್.ಎಂ.ಬೇವೂರ್ ಕೋರಿದ್ದರಾದರೂ ಅವರ ಕೋರಿಕೆಯಲ್ಲಿ ಯಾವುದೇ ಸಮರ್ಥನೆಯನ್ನು ನೀಡಿರುವುದಿಲ್ಲ. ಅವರ ವಾದವನ್ನು ಈಗಾಗಲೇ ವಿಚಾರಣಾ ಸಮಯದಲ್ಲಿ ಪರಿಶೀಲಿಸಲಾಗಿದೆ. ಅವುಗಳು ಸ್ವೀಕಾರಾರ್ಹವಲ್ಲವೆಂದು ನಿರ್ಣಯಿಸಲ್ಪಟ್ಟಿರುತ್ತದೆ. ಅವರ ಉತ್ತರವು ಯಾವುದೇ ಹೊಸ ಅಂಶಗಳಿಂದ ಕೂಡಿರುವುದಿಲ್ಲ. ಯಾವುದೇ ಕ್ರಮ ಜರುಗಿಸಬೇಕಾದರೆ ಜಿಲ್ಲಾ ಪಂಚಾಯತ್ ಸಾಮಾನ್ಯ ಸಭೆಯ ಮುಂದಾಗಲೀ ಅಥವಾ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯ ಮುಂದಾಗಲೀ ಈ ವಿಷಯವನ್ನು ಸಮಯೋಚಿತವಾಗಿ ಅವರು ಪ್ರಸ್ತಾಪಿಸಿರುವುದಿಲ್ಲ. ಹಾಗೂ ಸಮಯೋಚಿತವಾಗಿ ಪ್ರಸ್ತಾಪಿಸದೆ ಸಂಬಂಧಿಸಿದ ಕಡತವನ್ನು ತಮ್ಮ ಬಳಿ ಇಟ್ಟುಕೊಂಡು ಶ್ರೀ ಬಸವರಾಜ ಬರಶೆಟ್ಟಿ ಅವರ ವಿರುದ್ಧ ಕ್ರಮ ಕೈಗೊಳ್ಳಲು ಮಾಡಿದ ವಿಳಂಬದ ಹಿನ್ನೆಲೆಯಲ್ಲಿ ವಿಚಾರಣಾಧಿಕಾರಿಗಳ ವರದಿ ಹಾಗೂ ಸನ್ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿಕೊಂಡ ಸರ್ಕಾರವು ಶ್ರೀ ಎಸ್.ಎಂ.ಬೇವೂರ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರಿಗೆ ದಂಡನೆ ವಿಧಿಸಲು ಮತ್ತು ಶ್ರೀಮತಿ ಪಿ.ವಸುಂದರಾ ದೇವಿ, ಶ್ರೀ ದುಂಡಪ್ಪ, ಶ್ರೀ ಮಾಣಿಕ್‌ರಾವ್ ಖಾಟೆ ಅವರುಗಳನ್ನು ಆರೋಪಮುಕ್ತರನ್ನಾಗಿಸಲು ಸರ್ಕಾರವು ನಿರ್ಧರಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 112 ಎಸ್‌ಇಎನ್ 2000 ಬೆಂಗಳೂರು ದಿನಾಂಕ:24ನೇ ಜೂನ್ 2006.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಈ ಪ್ರಕರಣದ ಈ ಕೆಳಕಂಡ ಆರೋಪಿತರುಗಳಿಗೆ ಸಂಬಂಧಿಸಿದಂತೆ ಈ ಮುಂದಿನಂತೆ ಆದೇಶಿಸುತ್ತದೆ.

1) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(ii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಸ್.ಎಂ.ಬೇವೂರ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರಿಗೆ ವಾಗ್ದಂಡನೆ (Censure) ವಿಧಿಸುತ್ತದೆ. ಹಾಗೂ

2) ಶ್ರೀಮತಿ ಪಿ.ವಸುಂದರಾ ದೇವಿ, ಸಹಾಯಕ ಜಿಲ್ಲಾ ಆರೋಗ್ಯಾಧಿಕಾರಿ, ಶ್ರೀ ದುಂಡಪ್ಪ, ಸರ್ವೀಸ್ ಇಂಜಿನಿಯರ್, ಶ್ರೀ ಮಾಣಿಕ್‌ರಾವ್ ಖಾಟೆ, ಪ್ರಥಮ ದರ್ಜೆ ಸಹಾಯಕ ಮತ್ತು ಸ್ಟೋರ್ ಕೀಪರ್ ಅವರುಗಳನ್ನು ಅವರುಗಳ ವಿರುದ್ಧ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸುತ್ತದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಶ್ರೀಮತಿ ಪಿ.ವಸುಂದರಾ ದೇವಿ, ಸಹಾಯಕ ಜಿಲ್ಲಾ ಆರೋಗ್ಯಾಧಿಕಾರಿ, ಶ್ರೀ ದುಂಡಪ್ಪ, ಸರ್ವೀಸ್ ಇಂಜಿನಿಯರ್, ಶ್ರೀ ಮಾಣಿಕ್‌ರಾವ್ ಖಾಟೆ, ಪ್ರಥಮ ದರ್ಜೆ ಸಹಾಯಕ ಮತ್ತು ಸ್ಟೋರ್ ಕೀಪರ್ ಅವರುಗಳು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

ಪಿ.ಆರ್. 990

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಎಸ್.ಆರ್. ಕುಲಕರ್ಣಿ, ಹಿಂದಿನ ಉಪ ನೋಂದಣಾಧಿಕಾರಿ, ಹುಬ್ಬಳ್ಳಿ, ಧಾರವಾಡ ಜಿಲ್ಲೆ ಹಾಗೂ ಹಾಲೀ ಹಿರಿಯ ಉಪ ನೋಂದಣಾಧಿಕಾರಿ, ಗದಗ ಜಿಲ್ಲೆ ಇವರ ವಿರುದ್ಧ ದಾಖಲಾದ ದಾಳಿ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ:**
1. ಪೋಲೀಸ್ ಇನ್ಸ್‌ಪೆಕ್ಟರ್ ಹಾಗೂ ತನಿಖಾಧಿಕಾರಿಗಳು, ಕರ್ನಾಟಕ ಲೋಕಾಯುಕ್ತ, ಪೋಲೀಸ್ ಠಾಣೆ, ಧಾರವಾಡ, ಇವರ ಅಂತಿಮ ವರದಿ ಸಂಖ್ಯೆ: ಪಿಐ/ಕೆಎಲ್‌ಎ/ಗುನ್ನ ನಂ-9/2000/04-05, ದಿನಾಂಕ: 14-12-2004.
2. ಪೋಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ: ಲೋಕ್/ತನಿಖೆ/ಜಿ-21/ಸಿಆರ್-9 /2000 ಡಿಹೆಚ್‌ಆರ್ ದಿನಾಂಕ: 18-12-2004.
3. ಸರ್ಕಾರದ ಆದೇಶ ಸಂಖ್ಯೆ: ಕಂಇ 01 ಮುನೋಸೇ(2) 2005 ದಿನಾಂಕ:23/03/2005.
4. ಪೋಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ:ಐಎನ್‌ವಿ(ಜಿ)ಎಲ್-53/ಸಿಆರ್-9/2000/ಡಿಹೆಚ್‌ಆರ್, ದಿನಾಂಕ:06/04/2006.

**ಪ್ರಸ್ತಾವನೆ:**

ಶ್ರೀ ಎಸ್.ಆರ್. ಕುಲಕರ್ಣಿ, ಹಿಂದಿನ ಉಪ ನೋಂದಣಾಧಿಕಾರಿ, ಹುಬ್ಬಳ್ಳಿ, ಧಾರವಾಡ ಜಿಲ್ಲೆ, ಹಾಗೂ ಹಾಲೀ ಹಿರಿಯ ಉಪ ನೋಂದಣಾಧಿಕಾರಿ, ಗದಗ್ ಇವರ ವಿರುದ್ಧ ಗುನ್ನೆ ಸಂಖ್ಯೆ: 9/2000 ರಲ್ಲಿ ಧಾರವಾಡ ಪೋಲೀಸ್‌ಠಾಣೆಯಲ್ಲಿ ದಾಖಲಾಗಿರುವ ಪ್ರಕರಣದ ತನಿಖೆಯ ಮೇಲೆ-1 ರಲ್ಲಿ ಓದಲಾದ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಪೋಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಮೇಲೆ-2 ರಲ್ಲಿ ಓದಲಾದ ಪತ್ರದೊಂದಿಗೆ ಕಳುಹಿಸುತ್ತಾ ಶ್ರೀ ಎಸ್.ಆರ್. ಕುಲಕರ್ಣಿ, ಹಿಂದಿನ ಉಪ ನೋಂದಣಾಧಿಕಾರಿ, ಹುಬ್ಬಳ್ಳಿ ಹಾಗೂ ಹಾಲಿ ಹಿರಿಯ ಉಪ ನೋಂದಣಾಧಿಕಾರಿ ಗದಗ್ ಇವರನ್ನು ಲಂಚ ನಿರೋಧ ಕಾಯ್ದೆ 1988 ರ ಕಲಂ-19(1)(ಸಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರದ ಪ್ರಕಾರ ಘನ ನ್ಯಾಯಾಲಯದಲ್ಲಿ ಅಭಿಯೋಗಗೊಳಸಲು ಸಕ್ಷಮ ಪ್ರಾಧಿಕಾರವಾದ ಸರ್ಕಾರದ ಮಂಜೂರಾತಿ ನೀಡಬೇಕೆಂದು ಕೋರಿರುತ್ತಾರೆ.

ಮೇಲೆ ಓದಲಾದ-3 ರ ಆದೇಶದಲ್ಲಿ ಶ್ರೀ ಎಸ್.ಆರ್. ಕುಲಕರ್ಣಿ, ಹಿಂದಿನ ಉಪ ನೋಂದಣಾಧಿಕಾರಿ, ಹುಬ್ಬಳ್ಳಿ, ಧಾರವಾಡ ಜಿಲ್ಲೆ ಹಾಗೂ ಹಾಲೀ ಹಿರಿಯ ಉಪ ನೋಂದಣಾಧಿಕಾರಿ ಗದಗ್ ಇವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡಲಾಗಿತ್ತು. ಆದರೆ ಮೇಲೆ ಓದಲಾದ-4 ರ ಪತ್ರದೊಂದಿಗೆ ಆರಕ್ಷಕ ಮಹಾನಿರೀಕ್ಷಕರು ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಸದರಿ ಆದೇಶದ ಪತ್ರವನ್ನು ಹಿಂದಿರುಗಿಸುತ್ತಾ ಪರಿಷ್ಕೃತ ಆದೇಶ ಹೊರಡಿಸಲು ಕೋರಿರುತ್ತಾರೆ.

ಪೋಲೀಸ್ ಇನ್ಸ್‌ಪೆಕ್ಟರ್ ಹಾಗೂ ತನಿಖಾಧಿಕಾರಿಗಳು, ಲೋಕಾಯುಕ್ತ ಪೋಲೀಸ್‌ಠಾಣೆ, ಧಾರವಾಡ ರವರು ದಿನಾಂಕ:01-12-2005 ರಂದು ಸರ್ಕಾರದಲ್ಲಿ ಹಾಜರಾಗಿ ಈ ಕೆಳಕಂಡ ಮೂಲ ದಾಖಲೆಗಳನ್ನು ಪರಿಶೀಲನೆಗೆ ಒಳಪಡಿಸಿರುತ್ತಾರೆ.

1. ಪ್ರಥಮ ವರ್ತಮಾನ ವರದಿ ದಿನಾಂಕ: 2-11-2000 (ಪುಟ 22)

**2. ಶೋಧನಾ ಪಂಚನಾಮೆ:-**

ಅ) ಶ್ರೀ ಎಸ್.ಆರ್. ಕುಲಕರ್ಣಿ, ಹಿರಿಯ ಉಪ ನೋಂದಣಾಧಿಕಾರಿ, ಹುಬ್ಬಳ್ಳಿ ಇವರು ವಾಸಿಸುತ್ತಿರುವ ಮನೆ ನಂ (ಫ್ಲಾಟ್ ನಂ)-10, ಶಾಂಭವಿ ನಿಲಯ, ವಿದ್ಯಾ ನಗರ, ಸಿರೂರ ಪಾರ್ಕ್ ರಸ್ತೆ, ಹುಬ್ಬಳ್ಳಿ ಇದರ ಶೋಧನಾ ಪಂಚನಾಮೆ ದಿನಾಂಕ:3-11-2000 (ಪುಟ 50-108).

ಆ) ಹುಬ್ಬಳ್ಳಿ ಸಿದ್ದಾರೂಢ ನಗರದಲ್ಲಿರುವ ಭಾರತೀಯ ಸ್ಟೇಟ್ ಬ್ಯಾಂಕ್‌ನಲ್ಲಿರುವ ಶ್ರೀ ಎಸ್.ಆರ್. ಕುಲಕರ್ಣಿ, ಇವರ ಪತ್ನಿ ಶ್ರೀಮತಿ ಶಶಿಕಲಾದೇವಿ ಎಸ್. ಕುಲಕರ್ಣಿ ಇವರ ಹೆಸರಿನಲ್ಲಿದ್ದ ಲಾಕರ್ ನಂ 62 ರ ಜಪ್ತಿ ಪಂಚನಾಮೆ ದಿನಾಂಕ: 4-11-2005 (ಪುಟ- 110).

ಇ) ಶ್ರೀ ಎಸ್.ಆರ್. ಕುಲಕರ್ಣಿಯವರಿಗೆ ಸೇರಿದ ಗುಡಿಸಾಗರದ ಅವರ ಮನೆಯ ಜಪ್ತಿ ಪಂಚನಾಮೆ ದಿನಾಂಕ:3-11-2000 (ಪುಟ 112).

ಈ) ಶ್ರೀ ಎಸ್.ಆರ್. ಕುಲಕರ್ಣಿ, ಉಪನೋಂದಣಾಧಿಕಾರಿ ಇವರು ಕರ್ತವ್ಯ ನಿರ್ವಹಿಸುತ್ತಿದ್ದ, ಹುಬ್ಬಳ್ಳಿ ಹಿರಿಯ ಉಪ ನೋಂದಣಿ ಕಛೇರಿಯ ಜಪ್ತಿ ಪಂಚನಾಮೆ ದಿನಾಂಕ:3-11-2000 (ಪುಟ 130-132).

ಉ) ಶ್ರೀ ಎಸ್.ಆರ್. ಕುಲಕರ್ಣಿ, ಉಪನೋಂದಣಾಧಿಕಾರಿ ಯವರಿಗೆ ಸಂಬಂಧಿಸಿದ ಚರ-ಸ್ಥಿರ ಆಸ್ತಿಯ ಕಾಗದ ಪತ್ರಗಳ ಪರಿಶೀಲನಾ ಪಂಚನಾಮೆಯನ್ನು ದಿನಾಂಕ:5-2-2001 ರಂದು ಧಾರವಾಡ ಲೋಕಾಯುಕ್ತ ಪೋಲೀಸ್‌ಠಾಣೆಯ ಪೋಲೀಸ್ ಇನ್ಸ್‌ಪೆಕ್ಟರ್ ರವರ ಛೇಂಬರಿನಲ್ಲಿ ನಡೆಸಲಾಗಿದೆ (ಪುಟ 134-136).

3. ತನಿಖಾಧಿಕಾರಿಯವರ ಅಂತಿಮ ವರದಿ ದಿನಾಂಕ: 14-12-2004.
4. ತನಿಖೆಯ ಅಂತಿಮ ವರದಿಯ ಭಾಗಗಳಾದ ಈ ಕೆಳಕಂಡ ಅಂಶಗಳು:

**ಸಾಕ್ಷಿಗಳ ಹೇಳಿಕೆಗಳು** :

1. ಶ್ರೀ ಪ್ರಭು, ಮಹಾದೇವಾ ಸುಣಗಾರ, ದ್ವಿತೀಯ ದರ್ಜೆ ಸಹಾಯಕರು, ತೆರಿಗೆ ಇಲಾಖೆ, ವಯಸ್ಸು 43, ಉದ್ಯೋಗ (ಹುಬ್ಬಳ್ಳಿ-ಧಾರವಾಡ ಮಹಾನಗರ ಸಭೆ, ಧಾರವಾಡ).

2. ಶ್ರೀ ಮಂಜುನಾಥ್ ತಂದೆ ಚನ್ನಯ್ಯ ಪೂಜಾರಿ, ದ್ವಿತೀಯ ದರ್ಜೆ ಸಹಾಯಕರು, ಜಿಲ್ಲಾ ಖಜಾನೆ ಕಛೇರಿ, ಧಾರವಾಡ, ವಯಸ್ಸು-21 ವರ್ಷ.
3. ಶ್ರೀಮತಿ ಸುಮಿತ್ರಾ ಬಾಯಿ, ರಾಮಕೃಷ್ಣ, ದ್ವಿತೀಯ ದರ್ಜೆ ಸಹಾಯಕರು, ಜಿಲ್ಲಾ ಖಜಾನೆ ಕಛೇರಿ, ಧಾರವಾಡ, ವಯಸ್ಸು-50 ವರ್ಷ.
4. ಶ್ರೀ ಮನೀರ್ **ಅಹಮದ್** ಮೌಲಾಸಾಬ್‌ದೋನಿ, ದ್ವಿತೀಯ ದರ್ಜೆ ಸಹಾಯಕರು, ಹುಂದಾ ಮಹಾನಗರ ಪಾಲಿಕೆ ಧಾರವಾಡ, ವಯಸ್ಸು-27 ವರ್ಷ.
5. ಶ್ರೀಮತಿ ಬನಶಂಕರಿ, ಗುಂಡಾಚಾರ್ಯ, ಶ್ರೀಫ್ರಲಿಪಿಗಾರರು, ಚಿಕ್ಕ ನೀರಾವರಿ ಇಲಾಖೆ, ಧಾರವಾಡ, ವಯಸ್ಸು-33 ವರ್ಷ.
6. ಶ್ರೀ ಶಂಕರಪ್ಪ ಅಡಿವಪ್ಪ ಶರಣಪ್ಪನವರ, ದ್ವಿತೀಯ ದರ್ಜೆ ಸಹಾಯಕರು, ಚಿಕ್ಕನೀರಾವರಿ ವಿಭಾಗ, ಧಾರವಾಡ, ವಯಸ್ಸು 42 ವರ್ಷ.
7. ಶ್ರೀ ರಂಗನಾಥ ತಿರಕಪ್ಪ ಕುಸುಗಾರ, ಪ್ರಥಮ ದರ್ಜೆ ಸಹಾಯಕರು, ತಹಶೀಲ್ದಾರರ ಕಛೇರಿ, ಧಾರವಾಡ, ವಯಸ್ಸು-56 ವರ್ಷ.

**ಆದಾಯ:**

| | |
|---|---|
| 1. ವೇತನದಿಂದ ಅರ್ಜಿಸಿದ ಆದಾಯ | ಪುಟ ಸಂಖ್ಯೆ:691 ರಿಂದ 770ರವರೆಗೆ |
| 2. ಜಮೀನುಗಳಿಂದ ಬಂದ ಆದಾಯ | ಪುಟ ಸಂಖ್ಯೆ:771 ರಿಂದ 794ರವರೆಗೆ |
| 3. ಆಪಾದಿತ ಅಧಿಕಾರಿಯು ಬ್ಯಾಂಕುಗಳಿಂದ **ಅರ್ಜಿಸಿದ ಆದಾಯ** | ಪುಟ ಸಂಖ್ಯೆ:318 ರಿಂದ 325ರವರೆಗೆ<br>ಪುಟ ಸಂಖ್ಯೆ:336 ರಿಂದ 338ರವರೆಗೆ<br>ಪುಟ ಸಂಖ್ಯೆ:346 ರಿಂದ 357ರವರೆಗೆ<br>ಪುಟ ಸಂಖ್ಯೆ:595 ರಿಂದ 597ರವರೆಗೆ<br>ಪುಟ ಸಂಖ್ಯೆ:795 ರಿಂದ 804ರವರೆಗೆ |
| 4. ಆಪಾದಿತ ಅಧಿಕಾರಿಯು ಸಾಮಾನ್ಯ ಭವಿಷ್ಯ ನಿಧಿ ಖಾತೆಗೆ ತೊಡಗಿಸಿದ ಹಣಕ್ಕೆ ಅರ್ಜಿಸಿದ ಬಡ್ಡಿ ಹಣ. | ಪುಟ ಸಂಖ್ಯೆ:691 |
| 5. ಆಪಾದಿತ ಅಧಿಕಾರಿಯ ಮಗ ಬ್ಯಾಂಕುಗಳಿಂದ ಅರ್ಜಿಸಿದ ಆದಾಯ | ಪುಟ ಸಂಖ್ಯೆ:326 ರಿಂದ 328ರವರೆಗೆ<br>ಪುಟ ಸಂಖ್ಯೆ:334 ರಿಂದ 337ರವರೆಗೆ<br>ಪುಟ ಸಂಖ್ಯೆ:589 ರಿಂದ 593ರವರೆಗೆ<br>ಪುಟ ಸಂಖ್ಯೆ:603 ರಿಂದ 632ರವರೆಗೆ |
| 6. ಆಪಾದಿತ ಅಧಿಕಾರಿಯವರ ಪತ್ನಿಯವರು ಬ್ಯಾಂಕುಗಳಿಂದ ಅರ್ಜಿಸಿದ ಆದಾಯ | ಪುಟ ಸಂಖ್ಯೆ:338 ರಿಂದ 345ರವರೆಗೆ |

**ಆಸ್ತಿಗಳು:**

| | |
|---|---|
| 1. ಸ್ಥಿರ ಆಸ್ತಿಗಳು-ವಾಸದ ಮನೆ, ನಿವೇಶನಗಳು ಮತ್ತು ಜಮೀನುಗಳು. | ಪುಟ ಸಂಖ್ಯೆ:142 ರಿಂದ 156ರವರೆಗೆ<br>ಪುಟ ಸಂಖ್ಯೆ:172 ರಿಂದ 209ರವರೆಗೆ<br>ಪುಟ ಸಂಖ್ಯೆ:216 ರಿಂದ 244ರವರೆಗೆ<br>ಪುಟ ಸಂಖ್ಯೆ:248 ರಿಂದ 282ರವರೆಗೆ<br>ಪುಟ ಸಂಖ್ಯೆ:286 ರಿಂದ 293ರವರೆಗೆ<br>ಪುಟ ಸಂಖ್ಯೆ:296 ರಿಂದ 298ರವರೆಗೆ<br>ಪುಟ ಸಂಖ್ಯೆ:304 ರಿಂದ 315ರವರೆಗೆ |
| 2. ಚರ ಆಸ್ತಿಗಳು ಹಣಕಾಸು ಸಂಸ್ಥೆಗಳಲ್ಲಿ ಬ್ಯಾಂಕು ಖಾತೆಗಳಲ್ಲಿ ಮತ್ತು ಅಂಚೆ ಕಛೇರಿಯಲ್ಲಿ ತೊಡಗಿಸಿರುವ ಹಣ. | ಪುಟ ಸಂಖ್ಯೆ:318 ರಿಂದ 416ರವರೆಗೆ<br>ಪುಟ ಸಂಖ್ಯೆ:424 ರಿಂದ 447ರವರೆಗೆ |
| 3. ಕ್ಲಬ್ ಮೆಂಬರ್‌ಶಿಪ್‌ಗೆ ನೀಡಿದ ಠೇವಣಿ | ಪುಟ ಸಂಖ್ಯೆ:418 |
| 4. ಇನ್‌ಶೂರೆನ್ಸ್ ಕಂಪನಿಗಳಲ್ಲಿ ತೊಡಗಿಸಿದ ಹಣ | ಪುಟ ಸಂಖ್ಯೆ:424-447, 456-525 ರವರೆಗೆ |
| 5. ಮೋಟಾರು ವಾಹನಗಳು, ಎಲೆಕ್ಟ್ರಾನಿಕ್ ವಸ್ತುಗಳು, ನಗದು ಹಣ. | ಪುಟ ಸಂಖ್ಯೆ:50-179, 530-537, 542-557, 88-90 ರವರೆಗೆ |
| 6. ಚಿನ್ನಾಭರಣಗಳು | ಪುಟ ಸಂಖ್ಯೆ:116-120 ರವರೆಗೆ |
| 7. ಬೆಳ್ಳಿ ಆಭರಣಗಳು | ಪುಟ ಸಂಖ್ಯೆ:116-120 ರವರೆಗೆ |
| 8. ಪೀಠೋಪಕರಣಗಳು | ಪುಟ ಸಂಖ್ಯೆ:50-127 ರವರೆಗೆ |
| 9. ರೇಷ್ಮೆ ಸೀರೆಗಳು ಮತ್ತು ಇತರ ಉಡುಪುಗಳು | ಪುಟ ಸಂಖ್ಯೆ:50-127 ರವರೆಗೆ |
| 10. ಮನೆಬಳಕೆ ವಸ್ತುಗಳು | ಪುಟ ಸಂಖ್ಯೆ:50-127 ರವರೆಗೆ |

**ಖರ್ಚುಗಳು:**

| | |
|---|---|
| 1. ಆಪಾದಿತ ಅಧಿಕಾರಿಯವರು ತಮ್ಮ ಚೆಕ್ ಸೇವಾ ಅವಧಿಯಲ್ಲಿ ತಮ್ಮ ಹಾಗೂ ಕೌಟುಂಬಿಕ ನಿರ್ವಹಣೆಗಾಗಿ ಮಾಡಿದ ವೆಚ್ಚ. | ಪುಟ ಸಂಖ್ಯೆ: 558– 565 ರವರೆಗೆ |
| 2. ನಿವೇಶನ ಮತ್ತು ಜಮೀನುಗಳ ಖರೀದಿ ಸಂಬಂಧ ನೋಂದಣಿ ಖರ್ಚು | ಪುಟ ಸಂಖ್ಯೆ:172–187, 198–211 216–233, 262–269 286–295, 310–317 ರವರೆಗೆ |
| 3. ವಾಸದ ಮನೆಗೆ ಮಾಡಿದ ತೆರಿಗೆ ಸಂದಾಯ | ಪುಟ ಸಂಖ್ಯೆ: 567–570 ರವರೆಗೆ |
| 4. ಗುಡಿಸಾಗರ ಗ್ರಾಮ ಪಂಚಾಯ್ತಿಗೆ ಕಟ್ಟಿದ ಕಂದಾಯ | ಪುಟ ಸಂಖ್ಯೆ:571–574 ರವರೆಗೆ |
| 5. ಗ್ಯಾಸ್ ಸಂಪರ್ಕ | ಪುಟ ಸಂಖ್ಯೆ:526–529 ರವರೆಗೆ |
| 6. ವಿದ್ಯುತ್ ಸಂಪರ್ಕದ ಖರ್ಚು | ಪುಟ ಸಂಖ್ಯೆ:529ಎ, 575–588 ರವರೆಗೆ |
| 7. ದೂರವಾಣಿ ಸಂಪರ್ಕ | ಪುಟ ಸಂಖ್ಯೆ:538–541 ರವರೆಗೆ |
| 8. ವಾಹನ ಸಾಲದ ಮೇಲಿನ ಬಡ್ಡಿ | ಪುಟ ಸಂಖ್ಯೆ:589–594 ರವರೆಗೆ |
| 9. ಎಸ್.ಬಿ.ಐ. ಸಿದ್ಧಾರೂಢ ರಸ್ತೆ, ಹುಬ್ಬಳ್ಳಿಯಲ್ಲಿ ಹೊಂದಿರುವ ಲಾಕರ್ ಬಾಡಿಗೆ. | ಪುಟ ಸಂಖ್ಯೆ:599–602 ರವರೆಗೆ |
| 10. ಬ್ಯಾಂಕ್ ಸಾಲಗಳ ಮೇಲಿನ ಬಡ್ಡಿ | ಪುಟ ಸಂಖ್ಯೆ:598ಎ, 603–632 ರವರೆಗೆ |
| 11. ವಾಹನಗಳಿಗೆ ಇಂಧನ ಹಾಗೂ ನಿರ್ವಹಣೆ ವೆಚ್ಚ. | ಪುಟ ಸಂಖ್ಯೆ:633–636 ರವರೆಗೆ |
| 12. ಮ್ಯಾಕ್ಸಿ ಕ್ಯಾಬ್ ವಾಹನ ತೆರಿಗೆ | ಪುಟ ಸಂಖ್ಯೆ:637–638 ರವರೆಗೆ |
| 13. ಮಕ್ಕಳ ವಿದ್ಯಾಭ್ಯಾಸದ ಖರ್ಚು | ಪುಟ ಸಂಖ್ಯೆ:639–664 ರವರೆಗೆ |
| 14. ಗೃಹ ಪ್ರವೇಶದ ಖರ್ಚು | ಪುಟ ಸಂಖ್ಯೆ:665–670 ರವರೆಗೆ |
| 15. ಹುಬ್ಬಳ್ಳಿ ಜಮಖಾನ ಕ್ಲಬ್ಬಿನ ಸದಸ್ಯತ್ವಕ್ಕೆ ಕಟ್ಟಿದ ಹಣ. | ಪುಟ ಸಂಖ್ಯೆ:671–674 ರವರೆಗೆ |
| 16. ವಕೀಲರ ಸಂಘಕ್ಕೆ ಕೊಟ್ಟ ದೇಣಿಗೆ | ಪುಟ ಸಂಖ್ಯೆ:675–676 ರವರೆಗೆ |
| 17. ತಂದೆಯವರ ಸ್ಮರಣಾರ್ಥ ಜ್ಞಾನ ಪ್ರಸಾರ ಸಂಸ್ಥೆಗೆ ಹಾಗೂ ಶಿರ್ಸಿ ಮಾರಿಕಾಂಬ ದೇವಾಲಯಕ್ಕೆ ಕೊಟ್ಟ ದೇಣಿಗೆ | ಪುಟ ಸಂಖ್ಯೆ:677–680 ರವರೆಗೆ |
| 18. ಆಪಾದಿತರ ಪತ್ನಿ ಮಾರಿಕಾಂಬ ದೇವಸ್ಥಾನಕ್ಕೆ ಕೊಟ್ಟ ದೇಣಿಗೆ | ಪುಟ ಸಂಖ್ಯೆ:681–682 ರವರೆಗೆ |
| 19. ಚಕ್‌ಸೇವಾ ಅವಧಿಯಲ್ಲಿ ಸಂಬಳದಲ್ಲಿ ಕಟಾಯಿಸಿರುವ ವೃತ್ತಿ ತೆರಿಗೆ | ಪುಟ ಸಂಖ್ಯೆ:683–684 ರವರೆಗೆ |
| 20. ಆಪಾದಿತ ಅಧಿಕಾರಿಯು ತಮ್ಮ ಸಂಬಳದಿಂದ ಎಫ್‌ಬಿಎಫ್‌ಗೆ ಸಂದಾಯ ಮಾಡಿದ ಮೊತ್ತ, ಬೆಂಗಳೂರು, ತರಿಕೆರೆ ಮತ್ತು ಗುಲ್ಬರ್ಗಾದಲ್ಲಿ ಬಾಡಿಗೆ ಮನೆಯಲ್ಲಿದ್ದಾಗ ನೀಡಿದ ಬಾಡಿಗೆ ಹಣ. | ಪುಟ ಸಂಖ್ಯೆ:683–690 ರವರೆಗೆ |

ಪೊಲೀಸ್ ಇನ್ಸ್‌ಪೆಕ್ಟರ್ ಹಾಗೂ ತನಿಖಾಧಿಕಾರಿಗಳು, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಧಾರವಾಡ ರವರು ಶ್ರೀ ಎಸ್.ಆರ್. ಕುಲಕರ್ಣಿ, ಹಿಂದಿನ ಉಪ ನೋಂದಣಾಧಿಕಾರಿ ಹುಬ್ಬಳ್ಳಿ ಹಾಗೂ ಹಾಲೀ ಹಿರಿಯ ಉಪ ನೋಂದಣಾಧಿಕಾರಿ, ಗದಗ್ ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಪೊಲೀಸ್, ಲೋಕಾಯುಕ್ತರ ಪೊಲೀಸ್ ಠಾಣೆ, ಧಾರವಾಡದಲ್ಲಿ ಗುನ್ನೆ ಸಂಖ್ಯೆ:ಲೋಕ್/ತನಿಖೆ/ಜಿ–21/ಸಿಆರ್–9/2000, ಡಿಹೆಚ್ಆರ್, ದಿನಾಂಕ:02–11–2000 ರಂದು ಲಂಚ ನಿರೋಧಕ ಕಾಯಿದೆ 1988 ರ ಕಲಂ 13(1) (ಇ) ಜೊತೆಯಲ್ಲಿ ಓದಲಾದ ಕಲಂ–13(2) ರ ಅಡಿಯಲ್ಲಿ ದೂರನ್ನು ದಾಖಲಿಸಿಕೊಂಡಿರುತ್ತಾರೆ.

ಮೇಲ್ಕಂಡ ಪ್ರಕರಣವನ್ನು ದಾಖಲಿಸಿಕೊಂಡ ನಂತರ ತನಿಖಾಧಿಕಾರಿಗಳು:–

1. ಹುಬ್ಬಳ್ಳಿಯ ಸಿರೂರ ಪಾರ್ಕ್ ರಸ್ತೆಯಲ್ಲಿರುವ ಮನೆ ನಂ–10, 'ಶಾಂಭವಿ ನಿಲಯ'.
2. ಹುಬ್ಬಳ್ಳಿಯ ಸಿದ್ಧಾರೂಡ ನಗರದಲ್ಲಿರುವ ಭಾರತೀಯ ಸ್ಟೇಟ್ ಬ್ಯಾಂಕ್‌ನಲ್ಲಿ ಶ್ರೀ ಎಸ್.ಆರ್. ಕುಲಕರ್ಣಿಯವರ ಪತ್ನಿ ಶ್ರೀಮತಿ ಶಶಿಕಲಾದೇವಿ ಎಸ್. ಕುಲಕರ್ಣಿ, ಇವರ ಹೆಸರಿನಲ್ಲಿರುವ ಲಾಕರ್ ಸಂಖ್ಯೆ:62.
3. ಆಪಾದಿತ ಅಧಿಕಾರಿಯವರಿಗೆ ಸೇರಿದ ಗುಡಿ ಸಾಗರದ ಮನೆಯ ಶೋಧನೆ.

4. ಶ್ರೀ ಎಸ್.ಆರ್. ಕುಲಕರ್ಣಿ, ಉಪ ನೋಂದಣಾಧಿಕಾರಿ ಇವರು ಕಾರ್ಯ ನಿರ್ವಹಿಸುತ್ತಿದ್ದ ಹುಬ್ಬಳ್ಳಿ ಹಿರಿಯ ಉಪ ನೋಂದಣಿ ಕಛೇರಿ.

ಈ ಮೇಲ್ಕಂಡ ಸ್ಥಳಗಳನ್ನು ದಿನಾಂಕ:03-11-2000 ಮತ್ತು 04-11-2000ರಂದು ಪಂಚ ಸಾಕ್ಷಿಗಳ ಸಮಕ್ಷಮ ಶೋಧಿಸಿರುತ್ತಾರೆ. ಈ ಸಂದರ್ಭದಲ್ಲಿ ಬರೆಯಲಾದ ಶೋಧನಾ ಮಹಜರ್‌ಗಳ ಪ್ರಕಾರ ಆಪಾದಿತರ ಚರ ಮತ್ತು ಸ್ಥಿರಾಸ್ತಿ ಅಂದರೆ ಗೃಹೋಪಯೋಗಿ ಉಪಕರಣಗಳು, ಚಿನ್ನ ಮತ್ತು ಬೆಳ್ಳಿ, ಬ್ಯಾಂಕ್ ಡೆಪಾಸಿಟ್‌ಗಳು, ಪಾಲಿಸಿಗಳು, ವಾಹನಗಳು, ನಿವೇಶನಗಳು ಹಾಗೂ ಜಮೀನು ಇವುಗಳನ್ನೊಳಗೊಂಡಂತೆ ಆಸ್ತಿಗಳು ಮತ್ತು ಇವುಗಳಿಗೆ ಸಂಬಂಧಿಸಿದ ದಾಖಲೆಗಳು ಪತ್ತೆಯಾಗಿರುತ್ತವೆ.

ಸದರಿ ಪ್ರಕರಣದ ತನಿಖೆಯು ಪೂರ್ಣಗೊಂಡ ನಂತರ ಆಪಾದಿತ ಸರ್ಕಾರಿ ಅಧಿಕಾರಿಯವರಾದ ಶ್ರೀ ಎಸ್.ಆರ್. ಕುಲಕರ್ಣಿ, ಹಿಂದಿನ ಉಪ ನೋಂದಣಾಧಿಕಾರಿ, ಹುಬ್ಬಳ್ಳಿ ಹಾಗೂ ಹಾಲಿ ಹಿರಿಯ ಉಪ ನೋಂದಣಾಧಿಕಾರಿ, ಗದಗ್ ಉಪ ನೋಂದಣಿ ಕಛೇರಿ, ಇವರು ದಿನಾಂಕ:11-04-1977 ರಿಂದ 03-11-2000 ದ ವರೆಗಿನ " ಚಕ್ ಪಿರಿಯಡ್" ನಲ್ಲಿ ಅವರ ಚರ ಸ್ಥಿರ ಆಸ್ತಿಗಳ ಒಟ್ಟು ಮೊತ್ತ ರೂ.43,36,833.47 ಪೈಸೆಗಳ ಆಸ್ತಿಯನ್ನು ಹೊಂದಿರುತ್ತಾರೆಂದೂ ಮತ್ತು ಈ ಅವಧಿಯಲ್ಲಿ ಆಪಾದಿತರು ತಮ್ಮ ಮತ್ತು ತಮ್ಮ ಕುಟುಂಬದ ಸದಸ್ಯರಿಗಾಗಿ ಮಾಡಿರುವ ಒಟ್ಟು ಖರ್ಚು ರೂ.12,96,836.91 ಪೈಸೆಗಳಾಗಿದ್ದು, ಆಪಾದಿತರು ಈ ಅವಧಿಯಲ್ಲಿ ಎಲ್ಲಾ ಬಲ್ಲ ಮೂಲಗಳಿಂದ ಗಳಿಸಿರುವ ಆದಾಯವು ರೂ.34,74,278.76 ಪೈಸೆಗಳಾಗಿರುತ್ತದೆಂದು ಕಂಡು ಬಂದಿರುತ್ತದೆ. ಅಂದರೆ ಆಪಾದಿತ ಅಧಿಕಾರಿಯು ತಮ್ಮ ಬಲ್ಲಮೂಲಗಳಿಗಿಂತಲೂ ಹೆಚ್ಚಿನ ರೂ. 21,59,391.62 ಪ್ರಮಾಣದ ಆಸ್ತಿಯನ್ನು ಹೊಂದಿರುವುದು ಕಂಡು ಬಂದಿರುತ್ತದೆ.

ಆದ್ದರಿಂದ ಶ್ರೀ ಎಸ್.ಆರ್. ಕುಲಕರ್ಣಿ, ಹಿಂದಿನ ಉಪ ನೋಂದಣಾಧಿಕಾರಿ ಹುಬ್ಬಳ್ಳಿ, ಉಪ ನೋಂದಣಿ ಕಛೇರಿ ಮತ್ತು ಹಾಲೀ ಹಿರಿಯ ಉಪ ನೋಂದಣಾಧಿಕಾರಿ, ಉಪ ನೋಂದಣಿ ಕಛೇರಿ, ಗದಗ್ ಇವರು ಲಂಚ ನಿರೋಧಕ ಕಾಯಿದೆ 1988 ರ ಕಲಂ-13 (1) (ಇ) ರ ಜೊತೆ ಕಲಂ-13 (2) ರ ಅಡಿಯಲ್ಲಿ ಅಪರಾಧ ಎಸಗಿರುವುದು ಸ್ಪಷ್ಟವಾಗಿ ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ. ಆಪಾದಿತ ಸರ್ಕಾರಿ ನೌಕರರು ತಮ್ಮ ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಗಳಿಸಿ ಅಪರಾಧಿಕ ದುರ್ನಡತೆ ಎಸಗಿರುವುದರಿಂದ ಸದರಿಯವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಸುವುದು ಅತ್ಯಾವಶ್ಯಕ.

ಆಪಾದಿತರು ಲಂಚ ನಿರೋಧಕ ಕಾಯ್ದೆ 1988ರ ಕಲಂ-13(1)(ಇ) ಜೊತೆಗೆ ಓದಲಾದ ಕಲಂ-13 (2) ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಸರ್ಕಾರಕ್ಕೆ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಅನ್ವಯ ಕಲಂ-13(1)(ಇ) ಜೊತೆಗೆ ಓದಲಾದ ಕಲಂ-13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯವೆಂದು ಸರ್ಕಾರವು ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರ ಆಪಾದಿತರನ್ನು ಕೆಲಸದಿಂದ ತೆಗೆದುಹಾಕುವ / ವಜಾ ಮಾಡುವ ಅಧಿಕಾರವುಳ್ಳದ್ದಾಗಿರುತ್ತದೆ, ಹಾಗೂ ಈ ಬಗ್ಗೆ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8ರ ಅಡಿಯಲ್ಲಿ ಸಕ್ಷಮ ಪ್ರಾಧಿಕಾರಿಯಾಗಿರುತ್ತೇನೆ. ಆದ್ದರಿಂದ ಲಂಚ ನಿರೋಧಕ ಕಾಯ್ದೆ 1988ರ ಕಲಂ-19(1)(ಸಿ) ರ ಅಡಿ ಆಪಾಧಿತ ಅಧಿಕಾರಿಯವರಾದ ಶ್ರೀ ಎಸ್.ಆರ್. ಕುಲಕರ್ಣಿ ಹಿಂದಿನ ಉಪ ನೋಂದಣಾಧಿಕಾರಿ, ಉಪ ನೋಂದಣಿ ಕಛೇರಿ, ಹುಬ್ಬಳ್ಳಿ ಮತ್ತು ಹಾಲೀ ಹಿರಿಯ ಉಪ ನೋಂದಣಾಧಿಕಾರಿ, ಉಪ ನೋಂದಣಿ ಕಛೇರಿ, ಗದಗ್ ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ-13(1)(ಇ) ಜೊತೆಗೆ ಕಲಂ-13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ. ಅದರಂತೆ ಸರ್ಕಾರವು ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 30 ಮುನೊಸೇ(2) 2006, ಬೆಂಗಳೂರು, ದಿನಾಂಕ:-21ನೇ ಜೂನ್ 2006.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆಪಾದಿತರಾದ ಶ್ರೀ ಎಸ್.ಆರ್. ಕುಲಕರ್ಣಿ, ಇವರನ್ನು ಹುದ್ದೆಯಿಂದ ತೆಗೆದುಹಾಕುವ / ವಜಾ ಮಾಡುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಎಸ್.ಆರ್. ಕುಲಕರ್ಣಿ, ಹಿಂದಿನ ಉಪ ನೋಂದಣಾಧಿಕಾರಿ, ಉಪ ನೋಂದಣಿ ಕಛೇರಿ, ಹುಬ್ಬಳ್ಳಿ ಹಾಗೂ ಹಾಲಿ ಹಿರಿಯ ಉಪ ನೋಂದಣಾಧಿಕಾರಿ, ಉಪ ನೋಂದಣಿ ಕಛೇರಿ, ಗದಗ್ ಇವರನ್ನು ಲಂಚನಿರೋಧಕ ಕಾಯ್ದೆ 1988ರ ಕಲಂ-13(1)(ಇ) ಜೊತೆಯಲ್ಲಿ ಓದಲಾದ ಕಲಂ-13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಸಲು ಮಂಜೂರಾತಿ ಆದೇಶ ನೀಡಿದೆ.

ಕರ್ನಾಟಕ ರಾಜ್ಯ ಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಿವಲಿಂಗ**
ಪೀಠಾಧಿಕಾರಿ,
ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 992

**ವಿಷಯ:** ಶ್ರೀ ಎಸ್.ಆರ್. ಕುಲಕರ್ಣಿ, ಹಿಂದಿನ ಉಪ ನೋಂದಣಾಧಿಕಾರಿ, ಹುಬ್ಬಳ್ಳಿ, ಧಾರವಾಡ ಜಿಲ್ಲೆ ಹಾಗೂ ಹಾಲಿ ಹಿರಿಯ ಉಪ ನೋಂದಣಾಧಿಕಾರಿ, ಗದಗ ಜಿಲ್ಲೆ ಇವರ ವಿರುದ್ಧ ದಾಖಲಾದ ದಾಳಿ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ:**
1. ಪೊಲೀಸ್ ಇನ್‌ಸ್ಪೆಕ್ಟರ್ ಹಾಗೂ ತನಿಖಾಧಿಕಾರಿಗಳು, ಕರ್ನಾಟಕ ಲೋಕಾಯುಕ್ತ, ಪೊಲೀಸ್ ಠಾಣೆ, ಧಾರವಾಡ, ಇವರ ಅಂತಿಮ ವರದಿ ಸಂಖ್ಯೆ: ಪಿಐ/ಕೆಎಲ್ಎ/ಗುನ್ನ ನಂ-9/2000/04-05, ದಿನಾಂಕ: 14.12.2004.
2. ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ: ಲೋಕ್/ತನಿಖೆ/ ಜಿ-21/ಸಿಆರ್-9/2000 ಡಿಹೆಚ್ಆರ್ ದಿನಾಂಕ: 18.12.2004.

3. ಸರ್ಕಾರದ ಆದೇಶ ಸಂಖ್ಯೆ: ಕಂಇ 01 ಮುನೋಸೇ(2) 2005 ದಿನಾಂಕ:19.1.2006.
4. ಅಪರ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ. ಜಿಎಲ್ 53/ಸಿಆರ್-9/2000/ಡಿಹೆಚ್‌ಆರ್. ದಿನಾಂಕ:6.4.2006.

**ಪ್ರಸ್ತಾವನೆ:**

ಶ್ರೀ ಎಸ್.ಆರ್. ಕುಲಕರ್ಣಿ, ಹಿಂದಿನ ಉಪ ನೋಂದಣಾಧಿಕಾರಿ, ಉಪ ನೋಂದಣಿ ಕಛೇರಿ, ಹುಬ್ಬಳ್ಳಿ ಮತ್ತು ಹಾಲೀ ಹಿರಿಯ ಉಪ ನೋಂದಣಾಧಿಕಾರಿ, ಉಪ ನೋಂದಣಿ ಕಛೇರಿ, ಗದಗ್ ಇವರ ವಿರುದ್ದ ಗುನ್ಹೆ ಸಂಖ್ಯೆ:ಲೋಕ್/ತನಿಖೆ/ಜಿ-21/ಸಿಆರ್-9/2000/ಡಿಹೆಚ್‌ಆರ್ ರಲ್ಲಿ ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ-2ರ ಪ್ರಸ್ತಾವನೆಯಲ್ಲಿ ಆಪಾದಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ ಕಲಂ-19(1)(ಸಿ)ರಡಿಯಲ್ಲಿ ಮಂಜೂರಾತಿ ನೀಡುವಂತೆ ಕೋರಿದ್ದು, ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಮೇಲೆ-3ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಎಸ್.ಆರ್. ಕುಲಕರ್ಣಿ, ಇವರನ್ನು ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡಲಾಗಿತ್ತು.

ಆರಕ್ಷಕ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರು ಮೇಲೆ ಓದಲಾದ-3ರ ಓದಲಾದ ಸರ್ಕಾರದ ಆದೇಶದಲ್ಲಿ ಕೆಲವೊಂದು ಮಾರ್ಪಾಡು ಕೋರಿದ್ದು, ದೋಷರಹಿತವಾದ ಅಭಿಯೋಜನಾ ಮಂಜೂರಾತಿ ಆದೇಶವನ್ನು ನೀಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ-4ರ ಪತ್ರವನ್ನು ಪರಿಶೀಲಿಸಲಾಗಿದ್ದು, ಮೇಲೆ-3ರಲ್ಲಿ ಓದಲಾದ ಸರ್ಕಾರಿ ಆದೇಶವನ್ನು ರದ್ದುಪಡಿಸಲು ಹಾಗೂ ಪರಿಷ್ಕೃತ ಆದೇಶವನ್ನು ಹೊರಡಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 30 ಮುನೊಸೇ(2) 2006, ಬೆಂಗಳೂರು, ದಿನಾಂಕ: 21ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಕಂಇ 01 ಮುನೋಸೇ(2) 2005, ದಿನಾಂಕ: 19.1.2006ನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 993

**ಶಿವಲಿಂಗ**

ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

## FORESTS, ECOLOGY AND ENVIRONMENT SECRETARIAT

**Sub:** Diversion of 50.47 ha. of forest land for renewal of mining lease No.9221 in favour of Smt. V.Nagamma in Bellary District of Karnataka.

**Read:**
1. Letter No. A5(B1).MNG.CR.114/92-93, Dated:Nil-8.1992 of Principal Chief Conservator of Forests, Bangalore.
2. State Government letter No.FEE 51 FFM 92, dated: 13-9-1993
3. Govt.of India letter No.8-82/93-FC,dated: 2.9.1997.
4. Letter No.A5(B1)MNG.CR.114/92-93, dated: 7.4.2006 of Principal Chief Conservator of Forests, Bangalore.
5. State Government Letter No.FEE 171 FFM 2005, dated: 12.04.2006.
6. Government of India letter No.F.No.8-82/93-FC, dated: 10th May 2006.

**Preamble:-**

The Principal Chief Conservator of Forests had sent proposal vide his letter dated Nil-8-1992 read at (1) above for diversion of 50.47 ha. forest land for renewal of Mining Lease No.921 in favour of Smt.V.Nagamma in Bellary District under section 2 of Forest (Conservation) Act, 1980 subject to certain conditions.

The proposal of the Principal Chief Conservator of Forests was recommended to Government of India, Ministry of Environment and Forests, New Delhi vide Government letter dated: 13.9.1993 read at (2) above seeking prior approval of Government of India under section 2 of Forest (Conservation) Act, 1980.

After careful consideration of the proposal of the State Government, Government of India vide its letter dated: 2.9.1997 read at (3) above has agreed in-principle subject to the fulfillment of certain conditions.

In compliance of the conditions stipulated by Government of India vide its letter dated:6.2.2006 the Principal Chief Conservator of Forests vide his letter dated:07.04.2006 read at (4) above has sent his compliance report. This compliance report was forwarded to Government of India vide State Government letter dated 12/04/2006 read at (5) above.

Finally Government of India vide its letter dated 10th May 2006 read at (6) above has conveyed its general approval under Section 2 of Forest (Conservation) Act, 1980 for diversion of 50.47 ha. forest land for renewal of Mining Lease No.921 in favour of Smt. V.Nagamma in Bellary District subject to the fulfillment of certain conditions. Hence the order.

**Govt. Order No:FEE 171 FFM 2005, Bangalore, Dated: 23rd June 2006**

After examining all aspects of the matter and in view of the approval accorded to the proposal by Government of India, Ministry of Environment and Forests, New Delhi, Government are pleased to accord its approval for diversion of 50.47 ha. forest land for renewal of Mining Lease No.921 in favour of Smt. V.Nagamma in Bellary District under section 2 of Forest (Conservation) Act, 1980 subject to the following conditions.

1. Legal status of forest land shall remain unchanged.
2. (i) Compensatory Afforestation as well as Penal Compensatory Afforestation shall be raised and maintained by the State Forest Department at the project cost.
   (ii) Fencing, protection and regeneration of the safety zone area shall be carried out by the State Forest Department at the project cost.
3. The non-forest land identified for raising Compensatory afforestation shall be notified as Reserved Forest/Protected Forest under Section-4/ Section-29 of the Indian Forest Act, 1927 or under the corresponding Section(s) of the local Forest Act, as the case may be, by the State Government within six months. Nodal Officer shall report compliance in this regard.
4. The period of diversion of forest land shall be 20 years, or co-terminus with lease granted under MMRD act whichever is earlier, subject to possession of valid approval for the mining lease under the concerned Mining Act.
5. Reclamation Plan shall be strictly implemented which shall be monitored regularly by the State Forest Department.
6. The mining lease area shall be demarcated on ground using four feet high RCC pillars, with each pillar inscribed with the serial number, forward and backward bearings and distance between two adjacent pillars.
7. Any tree felling shall be done only when it is absolutely necessary, and that too under strict supervision of the State Forest Department.
8. No damage to the flora and fauna of the area shall be caused.
9. It shall be ensured that no labour-camps are set up inside the in-diverted forest area.
10. The forest land shall not be used for any purpose other than that specified in the proposal.
11. The lessee shall pay usual lease rent and supervision charges as prescribed by the Government from time to time.
12. The lessee has to pay the Net Present Value (NPV) fixed by the Govt. Notification No. FEE 247 FGL 2002 dated 17/01/2004.
13. All the funds obtained as Net Present Value of diverted forest land should be deposited with Compensatory Afforestation Fund Management of Planning Authority (CAMPA).
14. The lessee should open a firewood depot to the employees and labourers at the subsidized rates and the quantity to be prescribed by the Conservator of Forests/Deputy Conservator of Forests concerned.
15. The lessee should take up planting work on the static dumps during the advance mining operation.
16. The mining company should under take the afforestation measures in the area proposed for afforestation and also in other blank areas of the leased area.
17. The mining company should carryout soil and water conservation measures and other necessary measures as advised by the Forest Department.
18. The mining company should protect and nurture the natural growth in the area proposed for lease.
19. The applicant should undertake to protect rigidly the leased area and area surrounding forest area up to one kilometer distance from the fire.
20. The lessee should not cut the trees without prior permission of the Forest Department and all produce of permitted felling should be handed over to Forest Department under the cover of receipt transportation of ore should be strictly under transit rules.
21. The lessee should execute the agreement with the Department abiding usual conditions and terms including afforestation works necessitated for the safety of the department.
22. Any other condition that the State Government or the Chief Conservator of Forests (Central), Regional Office, Bangalore may impose from time to time in the interest of conservation, protection and development of forests.

By Order and in the name of the Governor of Karnataka,

**S.R. VATSALA**

Under Secretary to Government,

Forests, Ecology and Environment Department.

P.R. 994

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಶ್ರೀ ಎನ್.ವಿ. ಮುದುಗಲ್, ಅಂದಿನ ಕಿರಿಯ ಇಂಜಿನಿಯರ್, ತಾಲ್ಲೂಕು ಪಂಚಾಯತ್, ಶಿಗ್ಗಾಂವ್, ಇವರ ವಿರುದ್ಧದ ಲೋಕಾಯುಕ್ತ ಇಲಾಖಾ ವಿಚಾರಣೆ - ದೋಷಮುಕ್ತರನ್ನಾಗಿಸಿ ಆದೇಶ.

**ಓದಲಾಗಿದೆ:**
1. ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಇವರ ಅರೆ ಸರ್ಕಾರಿ ಪತ್ರದ ಸಂಖ್ಯೆ:ಕಂಪ್ಲೇಂಟ್:ಉಪಲೋಕ್:ಬಿಜಿಎಂ: 76:01-02:ಎಆರ್ಎಲೊ-3, ದಿ:13.6.03.
2. ಸರ್ಕಾರಿ ಆದೇಶ ಸಂ. ಗ್ರಾಅಪ 12 ಇಎನ್‌ಕ್ಯೂ 03, ದಿ. 3.10.2003.
3. ಲೋಕಾಯುಕ್ತ ಇವರ ಪತ್ರ ಸಂಖ್ಯೆ. LOK/ARE-4/ENQ-25/2003-04, ದಿ. 14.2.2006.

**ಪ್ರಸ್ತಾವನೆ:**

ಶಿಗ್ಗಾಂವ್, ತಾಲ್ಲೂಕು ಪಂಚಾಯತ್‌ನಲ್ಲಿ ಕಿರಿಯ ಇಂಜಿನಿಯರಾಗಿ, ಕರ್ತವ್ಯ ನಿರ್ವಹಿಸುತ್ತಿದ್ದ ಶ್ರೀ ಎನ್.ವಿ. ಮುದುಗಲ್, ಇವರು ಶಿಗ್ಗಾಂವ್ ತಾಲ್ಲೂಕಿನ ಗೊಟಗೋಡಿ ಗ್ರಾಮದ ಶ್ರೀಮತಿ ಶಂಕರವ್ವ ಕೋಂ ರುದ್ರಪ್ಪಮಟ್ಟಿ ಇವರಿಗೆ ಆಶ್ರಯ ಮನೆಯ ಸಹಾಯಧನ ಮಂಜೂರು ಮಾಡಲು 600-00 ರೂ.ಗಳ ಅಕ್ರಮ ಸಂಭಾವನೆಯನ್ನು ಒತ್ತಾಯ ಮಾಡಿ ಶ್ರೀ ರುದ್ರಪ್ಪ, ಇವರಿಂದ ಪಡೆಯುತ್ತಿದ್ದಾಗ ಲೋಕಾಯುಕ್ತ ಪೊಲೀಸರ ಬಲೆಗೆ ಸಿಲುಕಿದ್ದು, ತನಿಖೆಯ ಸಮಯದಲ್ಲಿ ಒದಗಿಸಿರುವ ಆಧಾರಗಳನ್ವಯ ಶ್ರೀ ಎನ್.ವಿ. ಮುದುಗಲ್, ಕಿರಿಯ ಇಂಜಿನಿಯರ್ ಇವರು ಎಸಗಿರುವ ದುರ್ನಡತೆಗಾಗಿ ಇವರ ಮೇಲೆ ಶಿಸ್ತಿನ ನಡವಳಿಗಳನ್ನು ಪ್ರಾರಂಭಿಸಬೇಕಾಗುತ್ತದೆಂದೂ ಅಂತೆಯೇ ಶ್ರೀ ಎನ್.ವಿ. ಮುದುಗಲ್, ಕಿರಿಯ ಇಂಜಿನಿಯರ್ ಇವರ ಮೇಲೆ ಕಠಿಣ ದಂಡನೆ ವಿಧಿಸಬಹುದಾದ ವಿಧಾನವನ್ನು ಅನುಸರಿಸಿ ಶಿಸ್ತಿನ ನಡವಳಿಗಳನ್ನು ಪ್ರಾರಂಭಿಸಲು ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಗಳು 1957ರ ನಿಯ 14(ಎ) ರಂತೆ ಪ್ರಕರಣವನ್ನು ಲೋಕಾಯುಕ್ತಕ್ಕೆ ವಹಿಸುವಂತೆ ಮಾನ್ಯ ಲೋಕಾಯುಕ್ತರು ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಕಲಂ 12 (3) ರನ್ವಯ ಶಿಫಾರಸ್ಸು ಮಾಡಿದ್ದು, ಅಂತೆಯೇ ಕ್ರಮ ಜುಗಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (1) ದಿ. 13.6.02ರ ಪತ್ರದಲ್ಲಿ ಲೋಕಾಯುಕ್ತ ರಿಜಿಸ್ಟ್ರಾರ್‌ರು ಕೋರಿದ್ದರು.

ಸರ್ಕಾರವು ಮಾನ್ಯ ಲೋಕಾಯುಕ್ತರ ವರದಿಯನ್ನು ಒಪ್ಪಿ, ಶ್ರೀ ಎನ್.ವಿ. ಮುದುಗಲ್, ಕಿರಿಯ ಇಂಜಿನಿಯರ್, ಇವರ ವಿರುದ್ಧ ಕ.ಸ.ಸೇ. (ವಿಮೇ.) ನಿಯಮ 1957ರ ನಿಯಮ 11ರ ವಿಧಿ ವಿಧಾನದನ್ವಯ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರಿ ಆದೇಶ ದಿ. 3.10.03ರಲ್ಲಿ ಕರ್ನಾಟಕ ಲೋಕಾಯುಕ್ತಕ್ಕೆ ವಹಿಸಿ ಆದೇಶಿಸಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಮಾನ್ಯ ಲೋಕಾಯುಕ್ತರ ಪತ್ರ ದಿ.14.2.06ರಲ್ಲಿ ವಿಚಾರಣಾ ವರದಿಯ ಪ್ರತಿಯನ್ನು ಕಳುಹಿಸುತ್ತಾ, ವರದಿಯ ಮೇಲೆ ನಿಯಮ-11ಎ ರನ್ವಯ ಕ್ರಮ ತೆಗೆದುಕೊಳ್ಳಬೇಕೆಂದು ಕೋರಿದ್ದಾರೆ. ವಿಚಾರಣೆ ನಡೆಸಿದ್ದ ಅಪರ ನಿಬಂಧಕರು-4 (ವಿಚಾರಣೆಗಳು), ಕರ್ನಾಟಕ ಲೋಕಾಯುಕ್ತ ಇವರು ತಮ್ಮ ವರದಿಯನ್ನು ಆಪಾದಿತ ಅಧಿಕಾರಿ ಹೇಳಿರುವಂತೆ ರೂ. 600/- ಗಳನ್ನು ತಾವು ಕೇಳಿ ಪಡೆದಿರುವುದಿಲ್ಲ. ದೂರು ನೀಡಿದ್ದ ವ್ಯಕ್ತಿಯೇ ತಮ್ಮ ಕೈಯಿಗೆ ಬಲವಂತದಿಂದ ನೀಡಿದ್ದು, ಇದರಲ್ಲಿ ತಾವು ನಿರ್ದೋಷಿ ಎಂದಿರುವುದನ್ನು ನಂಬಲು ಬಲವಾದ ಸಾಕ್ಷಿಗಳು ಇರುವುದರಿಂದ ಹಾಗೂ ಶಿಸ್ತು ಪ್ರಾಧಿಕಾರವು ಆರೋಪಿತ ಅಧಿಕಾರಿಯು ರೂ. 600/- ಗಳನ್ನು ಲಂಚವಾಗಿ ಕೇಳಿದ್ದರು ಎಂಬುದನ್ನು ಸಾಬೀತುಪಡಿಸಲು ವಿಫಲರಾಗಿರುವುದರಿಂದ, ಆರೋಪಿತ ಅಧಿಕಾರಿಯ ವಿರುದ್ಧ ಮಾಡಲಾದ ಆರೋಪವು ರುಜುವಾತಾಗಿಲ್ಲವೆಂದು ತಿಳಿಸಿ, ಸದರಿ ಅಧಿಕಾರಿಯನ್ನು ಆರೋಪ ಮುಕ್ತರನ್ನಾಗಿಸಿ, ವರದಿ ನೀಡಿರುತ್ತಾರೆ. ಸರ್ಕಾರವು ಸದರಿ ವರದಿಯನ್ನು ಒಪ್ಪಿ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 12 ಇಎನ್‌ಕ್ಯೂ 03, ಬೆಂಗಳೂರು, ದಿನಾಂಕ: 8ನೇ ಜೂನ್ 2006**

ಶ್ರೀ ಎನ್.ವಿ. ಮುದುಗಲ್, ಕಿರಿಯ ಇಂಜಿನಿಯರ್ ಇವರು ಶಿಗ್ಗಾಂವ್ ತಾಲ್ಲೂಕಿನ ಗೊಟಗೋಡಿ ಗ್ರಾಮದ ಶ್ರೀಮತಿ ಶಂಕರವ್ವ ಕೋಂ ರುದ್ರಪ್ಪಮಟ್ಟಿ ಇವರಿಗೆ ಆಶ್ರಯ ಮನೆಯ ಸಹಾಯಧನ ಮಂಜೂರು ಮಾಡಲು 600-0 ರೂ.ಗಳ ಕ್ರಮ ಸಂಭಾವನೆಯನ್ನು ಒತ್ತಾಯ ಮಾಡಿ ಶ್ರೀ ರುದ್ರಪ್ಪ, ಇವರಿಂದ ಪಡೆಯುತ್ತಿದ್ದಾಗ ಲೋಕಾಯುಕ್ತ ಪೊಲೀಸರ ಬಲೆಗೆ ಸಿಲುಕಿದ್ದ ಪ್ರಕರಣದಲ್ಲಿ, ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಅವರನ್ನು ಸದರಿ ಆರೋಪದಿಂದ ದೋಷಮುಕ್ತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 995

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಕೇಂದ್ರ ಪುರಸ್ಕೃತ ತ್ವರಿತ ನಗರ ನೀರು ಸರಬರಾಜು ಯೋಜನೆಯಡಿ ಯಳಂದೂರು ಪಟ್ಟಣ ಹಾಗೂ ಮಾರ್ಗ ಮಧ್ಯದ ಹಳ್ಳಿಗಳಿಗೆ 747.00 ಲಕ್ಷ ರೂ. ಗಳ ವೆಚ್ಚದಲ್ಲಿ ಕಾವೇರಿ ನದಿ ಮೂಲದಿಂದ ಕುಡಿಯುವ ನೀರು ಸರಬರಾಜು ಮಾಡುವ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ಜಂಟಿ ಸಲಹೆಗಾರರು, ಭಾರತ ಸರ್ಕಾರದ ನಗರಾಭಿವೃದ್ಧಿ ಮತ್ತು ಬಡತನ ನಿರ್ಮೂಲನೆ ಮಂತ್ರಾಲಯ, ನವದೆಹಲಿ ಇವರ ದಿ:14.12.2004 ರ ಪತ್ರ ಸಂಖ್ಯೆ: Q-12045/11(3)/2004/CPHEEO.
2. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರು ಇವರ ದಿ:8.12.2004 ರ ಪತ್ರ ಸಂಖ್ಯೆ:ಕಜಮ/ ತಾಂತ್ರಿಕ/ಮುಅ/ಉಮುಅ-1/ತಾಂಸ-1/ಸಅ-7/2920/2004-05.

**ಪ್ರಸ್ತಾವನೆ**

ಮೇಲೆ ಓದಲಾದ (1) ರ ಪತ್ರದಲ್ಲಿ 2004-05ನೇ ಸಾಲಿನಲ್ಲಿ ಚಾಮರಾಜನಗರ ಜಿಲ್ಲೆಯ ಯಳಂದೂರು ಪಟ್ಟಣಕ್ಕೆ ಕೇಂದ್ರ ಪುರಸ್ಕೃತ ತ್ವರಿತ ನಗರ ನೀರು ಸರಬರಾಜು ಯೋಜನೆ (AUWSP) ಯಡಿಯಲ್ಲಿ ಯೋಜನೆಯನ್ನು ಕೈಗೊಳ್ಳಲು ಭಾರತ ಸರ್ಕಾರವು ದಿನಾಂಕ:14.12.2004 ರ ಪತ್ರದಲ್ಲಿ ತಾಂತ್ರಿಕ ಅನುಮೋದನೆಯನ್ನು ನೀಡಿದೆ. ಸದರಿ ಯೋಜನೆಯಲ್ಲಿ ಭಾರತ ಸರ್ಕಾರ ಶೇಕಡ 50, ಫಲಾನುಭವಿ ನಗರ ಸ್ಥಳೀಯ ಸಂಸ್ಥೆಯ ಕೊಡುಗೆ ಶೇಕಡ 5 ಹಾಗೂ ಕರ್ನಾಟಕ ಸರ್ಕಾರವು ಶೇಕಡ 45ರಷ್ಟು ಅನುದಾನವನ್ನು ಭರಿಸಬೇಕಾಗುತ್ತದೆ. ಭಾರತ ಸರ್ಕಾರವು ಮೊದಲನೇ ಕಂತಾಗಿ ರೂ. 57.717 ಲಕ್ಷ ರೂ. ಗಳ ಹಣವನ್ನು ಬಿಡುಗಡೆ ಮಾಡಿದೆ. ನಂತರ ದಿನಾಂಕ:20.2.2006 ರಂದು 46.120 ಲಕ್ಷ ರೂ.ಗಳ ಹಣವನ್ನು

ಬಿಡುಗಡೆಗೊಳಿಸಿದೆ. ಕರ್ನಾಟಕ ರಾಜ್ಯ ಸರ್ಕಾರವು ಶೇಕಡ 50 ರಷ್ಟು ಸ್ಥಳೀಯ ಸಂಸ್ಥೆಯ ಪಾಲನ್ನು ಸಹ ಒಳಗೊಂಡು ಅನುದಾನವನ್ನು ಬಿಡುಗಡೆ ಮಾಡಬೇಕಾಗಿರುತ್ತದೆ.

ಮೇಲೆ ಓದಲಾದ (2) ರ ಪತ್ರದಲ್ಲಿ ಯಳಂದೂರು ಪಟ್ಟಣ ಹಾಗೂ ಮಾರ್ಗ ಮಧ್ಯದ 8 ಹಳ್ಳಿಗಳ ಜನಸಂಖ್ಯೆಯು 2001ರ ಜನಗಣತಿ ಪ್ರಕಾರ ಕ್ರಮವಾಗಿ 8500 ಮತ್ತು 21,515 ಇದ್ದು, ಯಳಂದೂರು ಪಟ್ಟಣದ ಜನಸಂಖ್ಯೆಗೆ ದಿನಂಪ್ರತಿ ತಲಾ 70 ಲೀಟರ್‌ನಂತೆ ಹಾಗೂ ಮಾರ್ಗ ಮಧ್ಯದ ಹಳ್ಳಿಗಳ ಜನಸಂಖ್ಯೆಗೆ ದಿನಂಪ್ರತಿ ತಲಾ 55 ಲೀಟರ್‌ನಂತೆ 15 ರಷ್ಟು ನಷ್ಟವನ್ನು ಪರಿಗಣಿಸಿ 20 ಗಂಟೆಗಳಲ್ಲಿ ಪಂಪು ಮಾಡಲು ಸುಮಾರು 3.54 ಎಂ.ಎಲ್.ಡಿ.ಗೆ. ಯೋಜನೆಯನ್ನು ವಿನ್ಯಾಸಿಸಲಾಗಿದೆ. ಸದರಿ ಕುಡಿಯುವ ನೀರು ಸರಬರಾಜು ಯೋಜನೆಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲು ಮಂಡಳಿಯು ಸರ್ಕಾರವನ್ನು ಕೋರಿದೆ. ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿದ್ದು, ಯಳಂದೂರು ಪಟ್ಟಣ ಹಾಗೂ ಮಾರ್ಗ ಮಧ್ಯದ 8 ಹಳ್ಳಿಗಳಿಗೆ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಕಾವೇರಿ ನದಿ ಮೂಲದಿಂದ ತ್ವರಿತ ನಗರ ಸರಬರಾಜು ಯೋಜನೆಯಡಿ ಕುಡಿಯುವ ನೀರನ್ನು ಸರಬರಾಜು ಮಾಡುವ ಪ್ರಸ್ತಾವನೆಗೆ ಆಡಳಿತಾತ್ಮಕ ಅನುಮೋದನೆ ನೀಡಲು ಸರ್ಕಾರವು ಉದ್ದೇಶಿಸಿದ್ದು, ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ನಅಇ 59 ಯುಡಬ್ಲ್ಯುಎಸ್ 04, ಬೆಂಗಳೂರು, ದಿನಾಂಕ: 23ನೇ ಜೂನ್ 2006**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಕೇಂದ್ರ ಪುರಸ್ಕೃತ ತ್ವರಿತ ನಗರ ನೀರು ಸರಬರಾಜು ಯೋಜನೆ (AUWSP) ಯಡಿ ಚಾಮರಾಜನಗರ ಜಿಲ್ಲೆಯ ಯಳಂದೂರು ಪಟ್ಟಣಕ್ಕೆ ಕಾವೇರಿ ನದಿಯ ನೀರನ್ನು ಮೂಲವಾಗಿಟ್ಟು ಕೊಂಡು ಕುಡಿಯುವ ನೀರನ್ನು ಒದಗಿಸಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ತಯಾರಿಸಿರುವ ರೂ. 747.00 ಲಕ್ಷ ರೂ. (ಏಳುನೂರು ನಲವತ್ತೇಳು ಲಕ್ಷ ರೂಪಾಯಿಗಳು ಮಾತ್ರ) ಗಳ ಅಂದಾಜಿಗೆ ಈ ಕೆಳಕಂಡ ಷರತ್ತು ಮತ್ತು ನಿಭಂದನೆಗೊಳಪಟ್ಟಂತೆ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿದೆ.

1. ಮೇಲ್ಕಂಡ ಕಾಮಾಗಾರಿಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಹಾಗೂ ನಿಯಮ 2000 ರಂತೆ ನಿರ್ವಹಿಸತಕ್ಕದ್ದು.
2. ನೀರಿನ ದರವನ್ನು ಸರ್ಕಾರಿ ಆದೇಶ ಸಂಖ್ಯೆ:ನಅಇ 204 ಯುಎಂಎಸ್ 95 ದಿನಾಂಕ:15.11.1996 ರಂತೆ ವಿಧಿಸುವುದು.
3. ಸದರಿ ಕಾಮಗಾರಿಯನ್ನು ಅನುಷ್ಠಾನಗೊಳಿಸುವಾಗ ತ್ವರಿತ ನಗರ ನೀರು ಸರಬರಾಜು ಯೋಜನೆಯ ಮಾರ್ಗಸೂಚಿಯನ್ನು ಹಾಗೂ ಭಾರತ ಸರ್ಕಾರದ ಸೂಚನೆಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.
4. ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡಕೂಡದು.
5. ಮೇಲ್ಕಂಡ ಯೋಜನೆಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ 21.3.2006ರ ಟಿಪ್ಪಣಿ FD ಸಂಖ್ಯೆ 93 ವೆಚ್ಚ 9 2006 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 996

**ಎನ್.ವೈ. ಸಾಗರ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ ಕೇಂದ್ರ ಸರ್ಕಾರದ ಎರಡನೇ ಕಂತಿನ ಅನುದಾನಕ್ಕೆ ಪೂರಕವಾಗಿ ಜಿಲ್ಲಾ ಪಂಚಾಯತಿಗಳಿಗೆ ಶೇಕಡಾ 20 ರ ಭಾಗಾಂಶದ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವನ್ನು 12 ಜಿಲ್ಲೆಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ:ವಿ.24015/12/2005/ಎಸ್‌ಜಿಆರ್‌ವೈ -II/ Sl.No.144 ದಿನಾಂಕ:27.12.2005 (11 ಜಿಲ್ಲೆಗಳಿಗೆ)
2. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ.ವಿ.24015/12/2005/ ಎಸ್‌ಜಿಆರ್‌ವೈ-II/ Sl.No.165 ದಿನಾಂಕ:5.1.2006 (9 ಜಿಲ್ಲೆಗಳಿಗೆ)
3. ಸರ್ಕಾರದ ಆದೇಶ ಸಂ. ಆರ್ ಡಿಪಿ/16/ಎಸ್‌ಜಿಆರ್‌ವೈ/2006 ದಿನಾಂಕ:19.5.06.

**ಪ್ರಸ್ತಾವನೆ:**

ಕೇಂದ್ರ ಸರ್ಕಾರವು ಉಲ್ಲೇಖ (1) ಮತ್ತು (2) ರಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ 2005-06ನೇ ಸಾಲಿಗೆ ಎರಡನೇ ಕಂತಿನ ಅನುದಾನವನ್ನು ಕ್ರಮವಾಗಿ 11 ಮತ್ತು 9 ಜಿಲ್ಲೆಗಳಿಗೆ ಹೀಗೆ ಒಟ್ಟು 20 ಜಿಲ್ಲಾ ಪಂಚಾಯತಿಗಳಿಗೆ ನೇರವಾಗಿ ಬಿಡುಗಡೆ ಮಾಡಿ, ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆ ಮಾಡುವಂತೆ ಆದೇಶಿಸಿದೆ. 2005-06 ನೇ ಸಾಲಿನಲ್ಲಿ ಆಡಳಿತಾತ್ಮಕ ತೊಂದರೆಗಳಿಂದ ರಾಜ್ಯದ ಪಾಲಿನ ಅನುದಾನವನ್ನು 20 ಜಿಲ್ಲಾ ಪಂಚಾಯತಿಗಳಿಗೆ ಸಕಾಲಕ್ಕೆ ಬಿಡುಗಡೆ ಮಾಡಲು ಸಾಧ್ಯವಾಗಿರುವುದಿಲ್ಲ. ಆದ್ದರಿಂದ, ರಾಜ್ಯ ಸರ್ಕಾರವು 20 ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತಿನ ಶೇಕಡಾ 20ರ ಭಾಗಾಂಶದ ರೂ. 404.462 ಲಕ್ಷಗಳನ್ನು (ರೂ. ನಾಲ್ಕು ಕೋಟಿ ನಾಲ್ಕು ಲಕ್ಷದ ನಲವತ್ತಾರು ಸಾವಿರದ ಇನ್ನೂರು ಮಾತ್ರ) ಉಲ್ಲೇಖ (3)ರಲ್ಲಿ ಬಿಡುಗಡೆ ಮಾಡಲಾಗಿದೆ. ಬಿಡುಗಡೆ ಮಾಡಬೇಕಾದ ಬಾಕಿ ಅನುದಾನ ರೂ. 19.448 (ರೂ. ಹತ್ತೊಂಬತ್ತು ಲಕ್ಷದ ನಲವತ್ತ ನಾಲ್ಕು ಸಾವಿರದ ಎಂಟುನೂರು ಮಾತ್ರ) ಗಳನ್ನು 12 ಜಿಲ್ಲೆಗಳಿಗೆ ಈಗ ಬಿಡುಗಡೆ ಮಾಡಲು ನಿರ್ಧರಿಸಿದೆ. ಆದ್ದರಿಂದ ಕೆಳಕಂಡ ಆದೇಶವನ್ನು ಹೊರಡಿಸದೆ.

**ಸರ್ಕಾರದ ಆದೇಶದ ಸಂಖ್ಯೆ:ಗ್ರಾಅಪ.16. ಎಸ್‌ಜಿಆರ್‌ವೈ . 2006 ಬೆಂಗಳೂರು, ದಿನಾಂಕ: 19ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, 2006-07ನೇ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯ ಜಿಲ್ಲಾ ಪಂಚಾಯತಿ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ರಾಜ್ಯದ 12 ಜಿಲ್ಲಾ ಪಂಚಾಯತಿಗಳಿಗೆ ಬಾಕಿ ಇರುವ ಎರಡನೇ ಕಂತಿನ ಅನುದಾನವಾದ ರೂ.19.448 ಲಕ್ಷಗಳನ್ನು (ರೂ.ಹತ್ತೊಂಭತ್ತು ಲಕ್ಷದ ನಲವತ್ತ ನಾಲ್ಕು ಸಾವಿರದ ಎಂಟು ನೂರು ಮಾತ್ರ) ಅನಬಂಧದಲ್ಲಿ ನಮೂದಿಸಿದಂತೆ, ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಿದೆ.

2006-07ನೇ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಗೆ ಈಗಾಗಲೇ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಬಿಡುಗಡೆಯ ಆದೇಶಗಳಲ್ಲಿ ಸುತ್ತೋಲೆಗಳ ಮೂಲಕ ಹಾಗೂ ಮಾರ್ಗಸೂಚಿಗಳಲ್ಲಿ ತಿಳಿಸಿರುವ ರೀತ್ಯಾ ಎಲ್ಲಾ ಷರತ್ತುಗಳನ್ನು ಮತ್ತು ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು ಯೋಜನೆಯ ಅನುದಾನದ ವೆಚ್ಚವನ್ನು ಈ ಕೆಳಕಂಡ ಲೆಕ್ಕ ಶೀರ್ಷಿಕೆಯಲ್ಲಿ ಭರಿಸತಕ್ಕದ್ದು,

ಜಿಲ್ಲಾ ಪಂಚಾಯತಿ "2505-ಗ್ರಾಮೀಣ ಉದ್ಯೋಗ-60-ಇತರೆ ಕಾರ್ಯಕ್ರಮಗಳು-196 ಜಿಲ್ಲಾ ಪಂಚಾಯತಿಗಳಿಗೆ ಸಹಾಯ-6-ಜಿಲ್ಲಾ ಪಂಚಾಯತಿಗಳು-04-ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (2505-60-196-6-04) 2006-07 (ಯೋಜನೆ)"

ಸರ್ಕಾರಿ ಆದೇಶ ಸಂಖ್ಯೆ. ಎಫ್‌ಡಿ.7. ಜೆಡ್‌ಪಿಎ.2003 ದಿನಾಂಕ:14.7.2005 ರನ್ವಯ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಕ್ರಮ ಜರುಗಿಸುವುದು. ಬಿಡುಗಡೆಯಾದ ಅನುದಾನವನ್ನು ತಡ ಮಾಡದೇ ಕಾರ್ಯಕ್ರಮಗಳ ಅನಿಷ್ಠಾನಕ್ಕೆ ಬಳಸಲು ಕ್ರಮವಹಿಸುವಂತೆ ಸೂಚಿಸಿದೆ.

ಈ ಅನುದಾನವನ್ನು ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಸದರಿ ಲೆಕ್ಕ ಶೀರ್ಷಿಕೆಯಡಿ ಗ್ರ್ಯಾಂಟ್-ಇನ್-ಏಡ್ ಬಿಲ್ಲುಗಳಲ್ಲಿ ಸಲ್ಲಿಸಿ ನಗದೀಕರಿಸಿಕೊಳ್ಳುವುದು. ವೋಚರ್ ಸಂಖ್ಯೆಮತ್ತು ಹಣ ಪಡೆದ ದಿನಾಂಕವನ್ನು ಸರ್ಕಾರಕ್ಕೆ ತಿಳಿಸತಕ್ಕದ್ದು.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ,ಗ್ರಾಅಪ/308/ಪಿಬಿಎಸ್/2006 ದಿನಾಂಕ: 16.06.2006 ರಲ್ಲಿ ಸಹಮತಿಸಿದಂತೆ, ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶಾಂತರಾಜ್**

ನಿರ್ದೇಶಕರು, ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ ಪದನಿಮಿತ್ತ,
ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭೀವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

**ANNEXURE**

**G.O.NO.RDP:16:SGRY:2006, Bangalore Dated:19th June 2006**

Statement showing the balance of II nd instalment of State share of assisttance pertaining to the 2005-06 released during 2006-07 under SGRY being the 20% of ZP share under Head of Account 2505-60-196-6-04

(Rs. in lakhs)

| Sl. No. | District | Code No. | Funds proposed for released | Funds already released on 19.5.06 | Balance of funds now being released |
|---|---|---|---|---|---|
| 1. | Bagalkot | 461 | 16.798 | 15.830 | 0.968 |
| 2. | Bangalore (U) | 401 | 18.492 | 16.860 | 1.632 |
| 3. | Belgaum | 413 | 25.138 | 22.920 | 2.218 |
| 4. | Bijapur | 414 | 20.352 | 18.550 | 1.802 |
| 5. | Gadag | 462 | 13.002 | 12.040 | 0.962 |
| 6. | Haveri | 463 | 16.374 | 14.930 | 1.444 |
| 7. | Kodagu | 411 | 13.978 | 12.740 | 1.238 |
| 8. | Kolar | 404 | 41.908 | 38.200 | 3.708 |
| 9. | Koppal | 466 | 15.398 | 14.040 | 1.358 |
| 10. | Tumkur | 406 | 34.380 | 32.740 | 1.640 |
| 11. | U. Kannada | 416 | 18.164 | 16.550 | 1.614 |
| 12. | Udupi | 457 | 9.384 | 8.520 | 0.864 |
| | **Total** | | **243.368** | **223.92** | **19.448** |

**R. SHANTHARAJ**
Director
Self Employment Programmes & E/o.
Addl. Secretary to Government
Rural Development & Panchayat Raj Dept.

P.R. 997

**ಆರ್ಥಿಕ ಸಚಿವಾಲಯ**

**ವಿಷಯ:** ಶ್ರೀ ಜಿ.ಆರ್. ರಂಗಸ್ವಾಮಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಚಿಕ್ಕಮಗಳೂರು ಇವರ ವಿರುದ್ದ ದಾಖಲಾದ ಟ್ರ್ಯಾಪ್ ಪ್ರಕರಣದಲ್ಲಿ ಪರಿಷ್ಕೃತ ಅಭಿಯೋಜನಾ ಮಂಜೂರಾತಿ ಕುರಿತು.

**ಉಲ್ಲೇಖ:**
1. ಎ.ಡಿ.ಜಿ.ಪಿ., ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ.ಲೋಕ್/ ಐಎನ್‌ವಿ(ಜಿ)/ ಎಂ.4/ ಪ್ರಸಂ.3/2005 ಚಿಕ್ಕಮಗಳೂರು, ದಿನಾಂಕ 1.12.2005.
2. ತನಿಖಾಧಿಕಾರಿಯ ವರದಿ ಸಂಖ್ಯೆ. ಚಿಕ್ಕಮಗಳೂರು ಎಲ್‌ಎಪಿಎಸ್ ಮೊ. ನಂ.3/2005, ದಿನಾಂಕ 19.9.205.

3. ತನಿಖಾ ದಾಖಲಾತಿಗಳ ನಕಲುಗಳಾದ ಪಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಇತ್ಯಾದಿ ದಾಖಲೆಗಳು.
4. ಸರ್ಕಾರದ ಆದೇಶ ಸಂಖ್ಯೆ. ಆಇ 18 ವಾತೆತ 2005, ದಿನಾಂಕ 28.3.2006.

**ಪ್ರಸ್ತಾವನೆ:**

ಶ್ರೀ ಜಿ.ಆರ್. ರಂಗಸ್ವಾಮಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಚಿಕ್ಕಮಗಳೂರು (ಪ್ರಸ್ತುತ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಸ್ಥಿತ್ಯಂತರ, ಹಾಸನ) ಇವರ ವಿರುದ್ಧ ಗುನ್ಹೆ ಸಂಖ್ಯೆ: 3/205ರಲ್ಲಿ ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಚಿಕ್ಕಮಗಳೂರು ಇವರು ಚಿಕ್ಕಮಗಳೂರು ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು (ಉಲ್ಲೇಖ-2,3) ಮಾನ್ಯ ಅಪರ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ:1.12.2005 (ಉಲ್ಲೇಖ-1) ರೊಡನೆ ಕಳುಹಿಸುತ್ತಾ, ಆಪಾದಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ ಕಲಂ 7,13(1)(ಡಿ)ರ ಜೊತೆಯಲ್ಲಿ ಓದಲಾದ ಕಲಂ 13(2)ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೊಳಪಡಿಸಲು ಉಲ್ಲೇಖಿತ ಕಾಯ್ದೆಯ 19ನೆಯ ಕಲಂ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿದ್ದರು. ಅದರಂತೆ ಉಲ್ಲೇಖ (4)ರಲ್ಲಿ ಸೂಚಿಸಿದ ಸರ್ಕಾರಿ ಆದೇಶದಲ್ಲಿ ಈ ಅಧಿಕಾರಿಯನ್ನು ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿಯನ್ನು ನೀಡಲಾಗಿತ್ತು. ಆದರೆ ತದನಂತರದ ಬೆಳವಣಿಗೆಯ ಹಿನ್ನೆಲೆಯಲ್ಲಿ ಪ್ರಕರಣವನ್ನು ಮತ್ತೊಮ್ಮೆ ಪರಿಶೀಲಿಸಲಾಗಿದೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು, ಎ.ಡಿ.ಜಿ.ಪಿ., ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಉಲ್ಲೇಖಿತ ಪತ್ರ ಸಂಖ್ಯೆ.ಲೋಕ್/ಐಎನ್‌ವಿ(ಜಿ)/ಎಂ-4/ಸಿಆರ್.3/2005 ಚಿಕ್ಕಮಗಳೂರು, ದಿನಾಂಕ: 1.12.2005ರೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

(ಅ) ಶ್ರೀ ತೇಜಿ ರಾಮಚಂದ್ರ ಬಿನ್ ತಿಮ್ಮಶೆಟ್ಟಿ, ಮಾಲೀಕರು, ತೇಜ ಗೊಬ್ಬರ ಮತ್ತು ಸಿಮೆಂಟ್ ಅಂಗಡಿ, ಉದ್ದೇಬೋರನಹಳ್ಳಿ, ಚಿಕ್ಕಮಗಳೂರು ತಾಲ್ಲೂಕು ಮತ್ತು ಜಿಲ್ಲೆ ರವರ ಪಿರ್ಯಾದಿ ದಿನಾಂಕ 31.3.2005.

(ಆ) ಪ್ರಥಮ ವರ್ತಮಾನ ವರದಿ ಚಿಕ್ಕಮಗಳೂರು ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ:3/2005.

(ಇ) ಪ್ರಾಯೋಗಿಕ ಪಂಚನಾಮೆ ದಿನಾಂಕ: 31.3.2005.

(ಈ) ಪಂಚನಾಮೆ ದಿನಾಂಕ: 31.3.2005.

(ಉ) ಪಂಚನಾಮೆ ದಿನಾಂಕ 1.4.2005.

(ಊ) ಟ್ರ್ಯಾಪ್ ಮಹಜರ್ ದಿನಾಂಕ 1.4.2005.

(ಎ) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ. ಪಿಹೆಚ್‌ಐ:ಲೋಕ್:3/05-06, ದಿನಾಂಕ: 30.5.2005.

(ಏ) ಕೃತ್ಯ ನಡೆದ ಸ್ಥಳದ ನಕಾಶೆ.

(ಐ) ಸಾಕ್ಷಿಗಳ ಹೇಳಿಕೆಗಳು

(1) ಶ್ರೀ ತೇಜಿ ರಾಮಚಂದ್ರ ಬಿನ್ ತಿಮ್ಮಶೆಟ್ಟಿ, ಮಾಲೀಕರು, ತೇಜ ಗೊಬ್ಬರ ಮತ್ತು ಸಿಮೆಂಟ್ ಅಂಗಡಿ, ಉದ್ದೇಬೋರನಹಳ್ಳಿ, ಚಿಕ್ಕಮಗಳೂರು ತಾಲ್ಲೂಕು ಮತ್ತು ಜಿಲ್ಲೆ (ಫಿರ್ಯಾದಿ).

(2) ಶ್ರೀ ಟಿ.ಸಿ. ಬಸವರಾಜು ಬಿನ್ ಚಂದ್ರಪ್ಪ, ಎಸ್.ಎಸ್.ಎಲ್. ಸಮಾಜ ಶಾಸ್ತ್ರ ಉಪನ್ಯಾಸಕರು, ಐಡಿಎಸ್‌ಜಿ ಸರ್ಕಾರಿ ಕಾಲೇಜು, ಚಿಕ್ಕಮಗಳೂರು.

(3) ಶ್ರೀ ಜಿ. ಪ್ರಹ್ಲಾದ್ ಬಿನ್ ತಿಪ್ಪೇಸ್ವಾಮಿ, ಉಪನ್ಯಾಸಕರು, ಇತಿಹಾಸ ವಿಭಾಗ, ಐಡಿಎಸ್‌ಜಿ ಸರ್ಕಾರಿ ಕಾಲೇಜು, ಚಿಕ್ಕಮಗಳೂರು.

(4) ಶ್ರೀ ಶಿವನಂಜೇಗೌಡ ಬಿನ್ ನಂಜೇಗೌಡ, ಶೀಘ್ರಲಿಪಿಗಾರರು, ವ್ಯವಸಾಯ ತೆರಿಗೆ ಉಪ ಆಯುಕ್ತರ ಕಛೇರಿ (ಆದಾಯ ತೆರಿಗೆ ನಿರ್ದಾರಣಾ ವಿಭಾಗ), ವಾಣಿಜ್ಯ ತೆರಿಗೆ ಕಛೇರಿಗಳ ಸಂಕೀರ್ಣ, ಕೆ.ಎಂ.ರಸ್ತೆ, ಚಿಕ್ಕಮಗಳೂರು.

(5) ಶ್ರೀ ಅಣ್ಣೇಗೌಡ ಬಿನ್ ಮಾಸ್ತೇಗೌಡ, ಪ್ಯೂನ್ (ಡಿ ದರ್ಜೆ ನೌಕರ), ಸಹಾಯಕ ವಾಣಿಜ್ಯ ತೆರಿಗೆ ಆಯುಕ್ತರ ಕಛೇರಿ, ಚಿಕ್ಕಮಗಳೂರು.

(6) ಶ್ರೀ ಎ.ಟಿ. ಅಪ್ಪು ಪೂಜಾರಿ ಬಿನ್ ತನಿಯಾ ಪೂಜಾರಿ, ಪ್ರಥಮ ದರ್ಜೆ ಸಹಾಯಕರು, ಸಹಾಯಕ ವಾಣಿಜ್ಯ ತೆರಿಗೆ ಆಯುಕ್ತರ ಕಛೇರಿ, ಚಿಕ್ಕಮಗಳೂರು.

(7) ಶ್ರೀ ಪ್ರದೀಪ್ ಬಿನ್ ತೇಜಿ ರಾಮಚಂದ್ರ, ತೇಜ ಗೊಬ್ಬರ ಮತ್ತು ಸಿಮೆಂಟ್ ಅಂಗಡಿ, ಉದ್ದೇಬೋರನಹಳ್ಳಿ ಚಿಕ್ಕಮಗಳೂರು ತಾಲ್ಲೂಕು ಮತ್ತು ಜಿಲ್ಲೆ (ಫಿರ್ಯಾದಿಯವರ ಮಗ).

(8) ಶ್ರೀ ಟಿ.ಎಲ್. ಹೇಮಂತ್ ಕುಮಾರ್ ಬಿನ್ ಲಕ್ಷ್ಮಣ, ಎಪಿಸಿ 160, ಜಿಲ್ಲಾ ಸಶಸ್ತ್ರ ಪಡೆ, ಚಿಕ್ಕಮಗಳೂರು.

(9) ಶ್ರೀ ಜಿ. ರಂಗೇಗೌಡ, ಸಿ.ಹೆಚ್.ಸಿ. ಪೊವಿ., ಕಲೋ., ಹಾಸನ.

(10) ಶ್ರೀ ರಾಯಪ್ಪ, ಸಿ.ಹೆಚ್.ಸಿ., ಪೊವಿ., ಕಲೋ, ಚಿಕ್ಕಮಗಳೂರು.

(11) ಶ್ರೀ ವಿ. ಲಕ್ಷ್ಮೀ ನಾರಾಯಣ, ಸಿಸಿಟಿ., ಪೊವಿ., ಕಲೋ, ಚಿಕ್ಕಮಗಳೂರು.

(12) ಶ್ರೀ ಪಾಲಾಕ್ಷ, ಸಿ.ಪಿ.ಸಿ, ಪೊವಿ., ಕಲೋ, ಹಾಸನ.

(13) ಶ್ರೀ ಸಿ.ಕೆ. ಮಹೇಂದ್ರಪ್ಪ, ಸಿ.ಪಿ.ಸಿ, ಪೊವಿ., ಕಲೋ, ಚಿಕ್ಕಮಗಳೂರು.

(14) ಶ್ರೀ ಬಿ.ಹೆಚ್. ವಿಜಯಕುಮಾರ ಸ್ವಾಮಿ, ಸಿ.ಪಿ.ಸಿ. ಪೊವಿ., ಕಲೋ., ಚಿಕ್ಕಮಗಳೂರು.

(ಎ) ತನಿಖಾ ಕಾಲದಲ್ಲಿ ಸಂಗ್ರಹಿಸಿದ ದಾಖಲೆಗಳು

(ಏ) ಆಪಾದಿತರ ಸಮಜಾಯಿಷಿ ಹೇಳಿಕೆಗಳು:-

(1) ಆರೋಪಿತ ಅಧಿಕಾರಿ ಶ್ರೀ ಜಿ.ಆರ್. ರಂಗಸ್ವಾಮಿ, ಸಹಾಯಕ ವಾಣಿಜ್ಯ ತೆರಿಗೆ ಆಯುಕ್ತರು, ಚಿಕ್ಕಮಗಳೂರು (ಪ್ರಸ್ತುತ ವಾ.ತೆ.ಸ.ಅ., ಸ್ಥಿತ್ಯಂತರ, ಹಾಸನ) ರವರ ಸ್ವರಕ್ಷಣಾ ಹೇಳಿಕೆ ದಿನಾಂಕ: 1.4.2005.

(2) ಆರೋಪಿತ ಶ್ರೀ ಮಹಮ್ಮದ್, ಆಡಿಟರ್, ಚಿಕ್ಕಮಗಳೂರು ಇವರ ಸ್ವರಕ್ಷಣಾ ಹೇಳಿಕೆ ದಿನಾಂಕ 1.4.2005.

ತನಿಖಾಧಿಕಾರಿಗಳಾದ ಶ್ರೀ ಹೆಚ್.ಎನ್. ಪಂಚಾಕ್ಷರಪ್ಪ, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಚಿಕ್ಕಮಗಳೂರು ಇವರು ಶ್ರೀ ಜಿ.ಆರ್. ರಂಗಸ್ವಾಮಿ, ಸಹಾಯಕ ವಾಣಿಜ್ಯ ತೆರಿಗೆ ಆಯುಕ್ತರು, ಚಿಕ್ಕಮಗಳೂರು (ಪ್ರಸ್ತುತ ವಾ.ತೆ.ಸ.ಅ., ಸ್ಥಿತ್ಯಂತರ, ಹಾಸನ)ರವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಚಿಕ್ಕಮಗಳೂರು ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಗುನ್ಹೆ ಸಂಖ್ಯೆ: 3/2005ರಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ 1988ರ ಕಲಂ 7,13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆರೋಪಿತರಾದ ಶ್ರೀ ಜಿ.ಆರ್. ರಂಗಸ್ವಾಮಿ, ಸಹಾಯಕ ವಾಣಿಜ್ಯ ತೆರಿಗೆ ಆಯುಕ್ತರು, ಚಿಕ್ಕಮಗಳೂರು (ಪ್ರಸ್ತುತ ವಾ.ತೆ.ಸ.ಅ., ಸ್ಥಿತ್ಯಂತರ, ಹಾಸನ) ರವರು ಪಿರ್ಯಾದಿಯಾದ ಶ್ರೀ ತೇಜಿ ರಾಮಚಂದ್ರ, ಮಾಲೀಕರು, ತೇಜ ಗೊಬ್ಬರ ಮತ್ತು ಸಿಮೆಂಟ್ ಅಂಗಡಿ, ಉದ್ದೇಬೋರನಹಳ್ಳಿ, ಚಿಕ್ಕಮಗಳೂರು ಇವರ ಮೇಲೆ ಕೇಸು ದಾಖಲಿಸದೇ ಇರಲು ರೂ.15,000/-ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾಧಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸಾರ್ವಜನಿಕ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ವ ಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ:1.4.2005ರಂದು ಚಿಕ್ಕಮಗಳೂರು ಇಲ್ಲಿ ಬೀಸಿದ ಟ್ರ್ಯಾಪ್ ಬಲೆಯು ಯಶಸ್ವಿಯಾಗಿ ಶ್ರೀ ಜಿ.ಆರ್. ರಂಗಸ್ವಾಮಿ, ಸಹಾಯಕ ವಾಣಿಜ್ಯ ತೆರಿಗೆ ಆಯುಕ್ತರು, ಚಿಕ್ಕಮಗಳೂರು (ಪ್ರಸ್ತುತ ವಾ.ತೆ.ಸ.ಅ., ಸ್ಥಿತ್ಯಂತರ, ಹಾಸನ) ಅಕ್ರಮ ಸಂಭಾವನೆಯಾದ 15,000/- ರೂ.ಗಳನ್ನು ರೋಪಿ-2 ಶ್ರೀ ಮೊಹಮ್ಮದ್, ಆಡಿಟರ್, ಚಿಕ್ಕಮಗಳೂರು ಇವರ ಮೂಲಕ ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ-2 ರವರ ಬಲಗೈ ಮತ್ತು ಎಡಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಹಾಗೂ ಶರಟಿನ ಜೇಬನ್ನು ಫಿನಾಪ್ತಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮವಾಗಿ ಪ್ರತಿಕ್ರಿಯಿಸಿದ್ದು,, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಡಪಟ್ಟರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸರ್ಕಾರಿ ನೌಕರರುಗಳ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ.15,000/-ಗಳನ್ನು ಶ್ರೀ ಮೊಹಮ್ಮದ್, ಆಡಿಟರ್, ಚಿಕ್ಕಮಗಳೂರು ಇವರಿಂದ ಆರೋಪಿತರ ಕಛೇರಿಯಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧಕ ಕಾಯ್ದೆ 1988ರ ಕಲಂ 7,13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸಂಪೂರ್ಣ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಅನ್ವಯ ಕಲಂ 7,13(1)ಡಿ) ಜೊತೆಯಲ್ಲಿ ಓಲಾದ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರವು ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಕ.ಸಿ.ಸೇ(ಸಿಸಿಎ) ನಿಯಮಗಳು 1957ರ ನಿಯಮ 8 (vii) ಮತ್ತು (viii) ರನ್ವಯ ಆಪಾದಿತನನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವನ್ನು ಹೊಂದಿರುತ್ತದೆ. ಆದ್ದರಿಂದ, ಲಂಚ ನಿರೋಧ ಕಾಯ್ದೆ 1988ರ ಕಲಂ 19(1)(ಬಿ)ರ ಅಡಿ ಆಪಾದಿತ ಅಧಿಕಾರಿ ಶ್ರೀ ಜಿ.ಆರ್. ರಂಗಸ್ವಾಮಿ, ಸಹಾಯಕ ವಾಣಿಜ್ಯ ತೆರಿಗೆ ಆಯುಕ್ತರು, ಚಿಕ್ಕಮಗಳೂರು (ಪ್ರಸ್ತುತ ವಾ.ತೆ.ಸ.ಅ., ಸ್ಥಿತ್ಯಂತರ, ಹಾಸನ) ಇವರನ್ನು ಕಲಂ 7,13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 18 ವಾತೆತ 2005, ಬೆಂಗಳೂರು, ದಿನಾಂಕ: 26ನೇ ಜೂನ್ 2006**

ಆರೋಪಿಯಾದ ಶ್ರೀ ಜಿ.ಆರ್. ರಂಗಸ್ವಾಮಿ, ಸಹಾಯಕ ವಾಣಿಜ್ಯ ತೆರಿಗೆ ಆಯುಕ್ತರು, ಚಿಕ್ಕಮಗಳೂರು (ಪ್ರಸ್ತುತ ವಾ.ತೆ.ಸ.ಅ., ಸ್ಥಿತ್ಯಂತರ, ಹಾಸನ) ಇವರನ್ನು ಹುದ್ದೆಯಿಂದ ತೆಗೆದು ಹಾಕುವ (ರಜಾ ಮಾಡುವ (ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಜಿ.ಆರ್. ರಂಗಸ್ವಾಮಿ, ಸಹಾಯಕ ವಾಣಿಜ್ಯ ತೆರಿಗೆ ಆಯುಕ್ತರು, ಚಿಕ್ಕಮಗಳೂರು (ಪ್ರಸ್ತುತ ವಾ.ತೆ.ಸ.ಅ., ಸ್ಥಿತ್ಯಂತರ, ಹಾಸನ) ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 7,13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಈ ಮೂಲಕ ಪರಿಷ್ಕೃತ ಮಂಜೂರಾತಿಯನ್ನು ನೀಡುತ್ತಿದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ 1977ರ ಈ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ: 26.6.2006 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 998

**ಆಲಿಸ್ ಗೊನ್ಸಾಲ್ವಿಸ್**

ಪೀಠಾಧಿಕಾರಿ, ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ-2)

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಉತ್ತರ ಕನ್ನಡ ಜಿಲ್ಲೆ ಸಿರಸಿ ಕಂದಾಯ ತಾಲ್ಲೂಕಿನ ನೋಟರಿ ನೇಮಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಲಾ 94 ಎಲ್‌ಸಿಎಲ್ 05 ದಿನಾಂಕ: 30.3.2005.
2. ಸರ್ಕಾರದ ಪತ್ರ ಸಂಖ್ಯೆ ಲಾ 94 ಎಲ್‌ಸಿಎಲ್ 05 ದಿನಾಂಕ:11.4.2005.
3. ಪತ್ರ:ಎಡಿಎಂ-II/6360/2005 ದಿನಾಂಕ:27.12.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಎಸ್.ಬಿ. ಶಿರಾಳಿ, ನೋಟರಿ, ಸಿರಸಿ ಇವರ ರಾಜೀನಾಮೆ ಅಂಗೀಕರಿಸಲಾಗಿತ್ತು. ಸದರಿ ಹುದ್ದೆ ತುಂಬುವ ಕುರಿತಂತೆ ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ನೋಟರಿ ನಿಯಮಾನುಸಾರ ಅರ್ಜಿಗಳನ್ನು ಆಹ್ವಾನಿಸಿ ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಉತ್ತರ ಕನ್ನಡ ಜಿಲ್ಲೆ ಇವರನ್ನು ಕೋರಲಾಗಿತ್ತು.

ಆ ಮೇರೆಗೆ ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಅದನ್ನು ಪರಿಶೀಲಿಸಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 94 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ: 3ನೇ ಜೂನ್ 2006**

ನೋಟರಿ ನಿಯಮಗಳ (1956) ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಅದರ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ಗಣಪತಿ ಹೆಗಡೆ, (ಜಿ.ಟಿ. ಹೆಗಡೆ) ವಕೀಲರು, ಬಸ್ತಿಗಲ್ಲಿ, ಶಿರಸಿ, ಉತ್ತರ ಕನ್ನಡ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಶಿರಸಿ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ಸರ್ಕಾರಿ ಖಜಾನೆಗಳಲ್ಲಿ ನಿಗದಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿಪ್ರಮಾಣ ಪತ್ರನೀಡಲಾಗುವುದು.

ತದನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952(ರ ಕಲಂ 4ರ ಅಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಕುಂತಲ ಹೆಚ್.ಆರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್. 999

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಸೈಯದ್ ನಜುಮುದ್ದೀನ್, ಅರ್ಥಶಾಸ್ತ್ರ ಆಯ್ಕೆ ಶ್ರೇಣಿ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಮಾಲೂರು – ಇವರನ್ನು ಸೇವೆಯಿಂದ ವಜಾ ಮಾಡುವ ಬಗ್ಗೆ.

**ಓದಲಾಗಿದೆ:**
1 ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ:ಕಾಶಿಆ /122/ ಎನ್‌ಓಸಿ /96–ಆಂತರಿಕ ದಿನಾಂಕ: 22.01.2002
2 ಕಾರಣ ಕೇಳುವ ನೋಟೀಸ್ ದಿನಾಂಕ: 14.11.2002
3 ಲಿಖಿತ ಹೇಳಿಕೆ ದಿನಾಂಕ: 13.02.2004
4 2ನೇ ಸ್ವರೂಪದ ಕಾರಣ ಕೇಳುವ ನೋಟೀಸು ದಿನಾಂಕ: 11.11.2005
5 ಲಿಖಿತ ಹೇಳಿಕೆ ದಿನಾಂಕ: 07.04.2006
6 ದಿನಾಂಕ: 16.06.2006ರ ಪತ್ರಿಕಾ ಪ್ರಕಟಣೆ

**ಪ್ರಸ್ತಾವನೆ:**

ಶ್ರೀ ಸೈಯದ್ ನಜುಮುದ್ದೀನ್, ಅರ್ಥಶಾಸ್ತ್ರ ಆಯ್ಕೆ ಶ್ರೇಣಿ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಮಾಲೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಏಪ್ರೀಲ್ 99 ರಿಂದ ಜೂನ್ 99ರ ಅಂತ್ಯದವರೆಗೆ ಅಮೇರಿಕಾ ದೇಶಕ್ಕೆ ಹೋಗಿ ಬರಲು ದಿನಾಂಕ: 26–04–99ರಂದು ಅನುಮತಿ ನೀಡಲಾಗಿತ್ತು. ಅವರು ನಿಗಧಿತ ಅವಧಿಯಲ್ಲಿ ವಿದೇಶ ಪ್ರವಾಸ ಕೈಗೊಳ್ಳದೆ ದಿನಾಂಕ: 16–06–99ರಂದು ಪ್ರವಾಸ ಕೈಗೊಂಡಿದ್ದರು. ನಂತರ ರಜೆ ವಿಸ್ತರಿಸುವಂತೆ ಕೋರಿದ್ದರ ಹಿನ್ನಲೆಯಲ್ಲಿ ದಿನಾಂಕ: 11–09–99 ರಿಂದ 06 ತಿಂಗಳ ರಜೆಯನ್ನು ವಿಸ್ತರಿಸಲಾಗಿರುತ್ತದೆ. ಅವರ ರಜಾ ಅವಧಿಯು ದಿನಾಂಕ: 11.03.2000ಕ್ಕೆ ಕೊನೆಗೊಂಡಿದ್ದಾಗ್ಯೂ ಸಹ ಅವರು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ನಂತರ ದಿನಾಂಕ: 05–12–2000ರಂದು ಕರ್ತವ್ಯಕ್ಕೆ ಹಾಜರಾಗಿ ದಿನಾಂಕ: 31–12–2000ರವರೆಗೆ ಮಾತ್ರ ಒಟ್ಟು 26 ದಿನಗಳು ಕರ್ತವ್ಯ ನಿರ್ವಹಿಸಿ ದಿನಾಂಕ: 01.01.2001 ರಿಂದ ಕರ್ತವ್ಯಕ್ಕೆ ಗೈರು ಹಾಜರಾಗಿರುವುದಾಗಿ ಕ್ರಮಾಂಕ(1)ರಲ್ಲಿ ಓದಲಾದ ದಿನಾಂಕ: 22–01–2002ರ ಪತ್ರದಲ್ಲಿ ಕಾಲೇಜು ಶಿಕ್ಷಣ ಆಯುಕ್ತರು ವರದಿ ಮಾಡಿರುತ್ತಾರೆ. ಈ ವರದಿಯನ್ವಯ 1957ರ ಕರ್ನಾಟಕ ನಾಗರೀಕ ಸೇವೆಗಳು (ಸಿಸಿಏ) ನಿಯಮಗಳ ಉಪಬಂಧಗಳಿಗೆ ಅನುಸಾರವಾಗಿ ನಿಯಮ 11ರಡಿಯಲ್ಲಿ ವಿಚಾರಣೆಯನ್ನು ನಡೆಸಲು ಉದ್ದೇಶಿಸಿ ದಿನಾಂಕ: 14.11.2002ರಂದು ದೋಷಾರೋಪಣಾ ಪಟ್ಟಿಗಳನ್ನು ಜಾರಿಗೊಳಿಸಲು ಕಳುಹಿಸಲಾಗಿತ್ತು. ಆದರೆ, ಅವರು ಯಾವುದೇ ವಿಳಾಸದಲ್ಲಿಯೂ ಇಲ್ಲದ ಪ್ರಯುಕ್ತ ಕಳುಹಿಸಲಾಗಿದ್ದ ಎಲ್ಲಾ ಪತ್ರಗಳೂ ವಾಪಸ್ ಬಂದಿರುತ್ತವೆ. ಮುಂದಿನ ಕ್ರಮ ಜರುಗಿಸಲು ತೀವ್ರ ಪರಿಶೀಲನೆಯಲ್ಲಿದ್ದಾಗ ಅವರು ದಿನಾಂಕ: 10–02–2004ರಲ್ಲಿ ಆರೋಪ ಪಟ್ಟಿಗಳನ್ನು ಸ್ವೀಕರಿಸಿ ಮೇಲೆ ಓದಲಾದ ಕ್ರಮಾಂಕ (3)ರಲ್ಲಿ ಲಿಖಿತ ಸಮಜಾಯಿಷಿಯನ್ನು ದಿನಾಂಕ: 13–02–2004ರ ಪತ್ರದ ಮುಖಾಂತರ ನೀಡಿರುತ್ತಾರೆ. ಆದರೆ, ಈ ಪತ್ರದಲ್ಲೂ ಸಹ ತಮ್ಮ ಸ್ಪಷ್ಟ ವಿಳಾಸವನ್ನು ನೀಡಿರುವುದಿಲ್ಲ. ಕೇವಲ ಆಯ್ಕೆ ಶ್ರೇಣಿ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಮಾಲೂರು, ಕೋಲಾರ ಜಿಲ್ಲೆ ಎಂದು ಮಾತ್ರ ನಮೂದಿಸಿರುತ್ತಾರೆ.

ಈ ಮಧ್ಯೆ ಸರ್ಕಾರಿ ಕೆಲಸಕ್ಕೆ ಸತತವಾಗಿ ಗೈರುಹಾಜರಾಗುವುದನ್ನು ಮುಂದುವರೆಸಿ ದಿನಾಂಕ: 04–12–2002ರಂದು ಮಧ್ಯಾಹ್ನದ ವೇಳೆಯಲ್ಲಿ ಕಾಲೇಜಿನಲ್ಲಿ ಪ್ರಭಾರ ಪ್ರಾಂಶುಪಾಲರು ಇಲ್ಲದ ಸಮಯದಲ್ಲಿ ದ್ವಿತೀಯ ದರ್ಜೆ ಸಹಾಯಕರನ್ನು ಬೆದರಿಸಿ ಕರ್ತವ್ಯಕ್ಕೆ ಹಾಜರಾಗಿರುವುದಾಗಿ ಬರೆದ ಪತ್ರವನ್ನಿಟ್ಟು ಇನ್ನೊಂದು ಪ್ರತಿಗೆ ಅವರೇ ಕಾಲೇಜಿನ ಮೊಹರನ್ನು ತೆಗೆದುಕೊಂಡು ಮುದ್ರಿಸಿಕೊಂಡು ಹೊರಟು ಹೋಗಿರುವುದು ಈ ದುರ್ನಡತೆಯ ಆರೋಪಕ್ಕೆ ಹೊಂದಿಕೊಂಡಂತೆ ಇನ್ನಿತರ ಆರೋಪಗಳನ್ನು ರಚಿಸಿ ದಿನಾಂಕ: 11–11–2005ರಲ್ಲಿ 2ನೇ ಸ್ವರೂಪದ ಆರೋಪ ಪಟ್ಟಿಗಳನ್ನು ರಚಿಸಿ ನೋಟೀಸು ಮೂಲಕ ಜಾರಿಮಾಡಲು ಮೇಲೆ ಕ್ರಮಾಂಕ (4)ರಲ್ಲಿ ಓದಲಾದ ದಿನಾಂಕ: 11–11–2005ರಂದು ನೋಟೀಸ್‌ನ್ನು ಕಳುಹಿಸಿಕೊಡಲಾಗಿತ್ತು. ಆದರೆ, ಅವರು ಯಾವುದೇ ವಿಳಾಸಗಳಲ್ಲಿಯೂ ಲಭ್ಯವಿಲ್ಲದ ಪ್ರಯುಕ್ತ 2ನೇ ಸ್ವರೂಪದ ಆರೋಪ ಪಟ್ಟಿಗಳೂ ಸಹ ಜಾರಿಯಾಗದೆ ಹಿಂತಿರುಗಿ ಬಂದಿರುತ್ತವೆ. ಆದರೆ, ನೋಟೀಸನ್ನು ದಿನಾಂಕ: 31–03–2006 ರಂದು ಸ್ವೀಕರಿಸಿರುವುದಾಗಿ ತಿಳಿಸಿ ದಿನಾಂಕ: 07–04–2006ರ ಮನವಿಯ ಪ್ರತಿಯನ್ನು ಸರ್ಕಾರಕ್ಕೆ ಮುಂಗಡ ಪತ್ರವೆಂದು ಹಾಗೂ ಈ ಮನವಿಯೊಂದಿಗೆ

ಸಮಜಾಯಿಷಿ ಹೇಳಿಕೆಯ ಪ್ರತಿಯನ್ನೂ ಲಗತ್ತಿಸಿ ಕಳುಹಿಸಿದ್ದಾರೆ. ಸದರಿ ಹೇಳಿಕೆಯಲ್ಲಿ ತಮ್ಮ ವಿಳಾಸವನ್ನು ತಿಳಿಸದೆ ಕೇವಲ ಆಯ್ಕೆ ಶ್ರೇಣಿ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಮಾಲೂರು, ಕೋಲಾರ ಜಿಲ್ಲೆ ಎಂದು ಮಾತ್ರ ತಿಳಿಸಿರುತ್ತಾರೆ. ಹೇಳಿಕೆಯ ಪ್ರತಿಯಲ್ಲಿ ಅವರ ವಿರುದ್ಧ ವಿಚಾರಣೆಯನ್ನು ಜರುಗಿಸುವುದಾದರೆ ಆರೋಪ ಪಟ್ಟಿಯ ಅನುಬಂಧ–3ರಲ್ಲಿ ಪಟ್ಟಿ ಮಾಡಿರುವ ದಾಖಲೆಗಳನ್ನು ನೀಡುವಂತೆ ಮತ್ತು ಅವರ ಪರವಾಗಿ ವಾದಿಸಲು ವಕೀಲರನ್ನು ನೇಮಕ ಮಾಡಿಕೊಳ್ಳಲು ಅನುಮತಿ ಕೋರಿದ್ದಾರೆ.

ಶ್ರೀ ಸೈಯದ್ ನಜುಮುದ್ದೀನ್ ರವರು ಕಾಲೇಜಿನಲ್ಲಿ ಈವರೆವಿಗೂ ಕರ್ತವ್ಯಕ್ಕೆ ಹಾಜರಾಗದೆ ಸತತವಾಗಿ ಅನಧಿಕೃತವಾಗಿ ಗೈರು ಹಾಜರಾಗಿರುವುದು ಅವರಿಗೆ ಕರ್ತವ್ಯದಲ್ಲಿ ಆಸಕ್ತಿ ಇಲ್ಲವೆಂಬುದನ್ನು ಸೂಚಿಸುತ್ತದೆ. ಅವರಿಗೆ ದಾಖಲೆಗಳನ್ನು ಒದಗಿಸಲು ಅಥವಾ ಮುಂದಿನ ಯಾವುದೇ ನೋಟೀಸ್‌ಗಳನ್ನು ಅಧಿಕೃತವಾಗಿ ಜಾರಿ ಮಾಡಲು ಅವರು ಎಲ್ಲಿದ್ದಾರೆಂಬುದೇ ತಿಳಿಯದಾಗಿದೆ. ಅವರ ದೀರ್ಘಕಾಲದ ಅನಧಿಕೃತ ಗೈರುಹಾಜರಿ ಹಾಗೂ ಬೇಜವಾದ್ದಾರಿ ವರ್ತನೆಯಿಂದ ಕಾಲೇಜಿನಲ್ಲಿ ಪಾಠಪ್ರವಚನಗಳಿಗೆ ಹೆಚ್ಚಿನ ತೊಂದರೆ ಉಂಟು ಮಾಡಿರುವುದು, ಅವರ ಈ ವರ್ತನೆಯು ಕರ್ನಾಟಕ ನಾಗರೀಕ ಸೇವೆಗಳು (ನಡತೆ) ನಿಯಮ 1966ರ ನಿಯಮ 3ರ (i)(ii)(iii)ರ ಉಪಬಂಧಗಳಿಗೆ ವಿರುದ್ಧವಾಗಿರುತ್ತದೆ. ಅದರಂತೆ ಶ್ರೀ ಸೈಯದ್ ನಜುಮುದ್ದೀನ್ ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು, 1958ರ ನಿಯಮ 108 ಹಾಗೂ ಕರ್ನಾಟಕ ನಾಗರೀಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ii) ಹಾಗೂ ಅದೇ ನಿಯಮಾವಳಿಯ ನಿಯಮ 8(viii)ನ್ನು ಓದಿಕೊಂಡಂತೆ ಇವರನ್ನು ಸರ್ಕಾರಿ ಸೇವೆಯಿಂದ ಏಕೆ ವಜಾ ಮಾಡಬಾರದು ಎಂಬುದರ ಬಗ್ಗೆ ಅವರ ಸಮಜಾಯಿಷಿಯನ್ನು ಮತ್ತು ಅಂತಿಮವಾಗಿ ಎಚ್ಚರಿಸಲು ಕರ್ನಾಟಕ ನಾಗರೀಕ ಸೇವೆಗಳು (ಸಿಸಿಎ) 1957ರ ನಿಯಮ 28(ಎ)ರನ್ವಯ ಅವರ ಅನಧಿಕೃತ ಗೈರುಹಾಜರಿ ಬಗ್ಗೆ ರಾಜ್ಯದ ಅತ್ಯಧಿಕ ಪ್ರಸಾರವುಳ್ಳ ಎರಡು ದಿನ ಪತ್ರಿಕೆಗಳಲ್ಲಿ ದಿನಾಂಕ: 16–06–2006ರಂದು ಅನಧಿಕೃತ ಗೈರುಹಾಜರಿ ಪ್ರಕಟಣೆ ನೀಡಿ ಕೆ.ಸಿ.ಎಸ್.ಆರ್. ನಿಯಮಗಳು, 1958ರ ನಿಯಮ 108 ಹಾಗೂ ಕರ್ನಾಟಕ ನಾಗರೀಕ ಸೇವೆಗಳು (ಸಿಸಿಎ) ನಿಯಮ 14(ii)ರ ರೀತ್ಯ ಹಾಗೂ ಅದೇ ನಿಯಮಾವಳಿಯ ನಿಯಮ 8(viii)ರ ಪ್ರಕಾರ ಸರ್ಕಾರಿ ಸೇವೆಯಿಂದ ವಜಾ ಮಾಡಬಾರದೇಕೆ ಎಂದು ಅಂತಿಮವಾಗಿ ಎಚ್ಚರಿಕೆ ನೀಡಿ ದಿನಾಂಕ: 16–06–2006ರ ಪ್ರಜಾವಾಣಿ ಹಾಗೂ ವಿಜಯ ಕರ್ನಾಟಕ ದಿನಪತ್ರಿಕೆಗಳಲ್ಲಿ ಪ್ರಕಟವಾದ ಏಳು ದಿನಗಳ ಒಳಗಾಗಿ ನೋಟೀಸಿಗೆ ಸಹಿ ಮಾಡಿರುವ ಸಕ್ಷಮ ಪ್ರಾಧಿಕಾರದ ಮುಂದೆ ಖುದ್ದಾಗಿ ಹಾಜರಾಗಬೇಕೆಂದು, ತಪ್ಪಿದ್ದಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರ ಚಲಾಯಿಸಿ ಯಾವುದೇ ಮರುಸೂಚನೆ ನೀಡದೆ ಸರ್ಕಾರಿ ಸೇವೆಯಿಂದ ವಜಾಗೊಳಿಸಲಾಗುವುದೆಂದು ಅಂತಿಮ ಎಚ್ಚರಿಕೆ ನೀಡಲಾಗಿತ್ತು. ಈ ಎಲ್ಲಾ ಪ್ರಕ್ರಿಯೆಗಳು ಜರುಗಿದ್ದಾಗ್ಯೂ ಶ್ರೀ ಸೈಯದ್ ನಜುಮುದ್ದೀನ್ ಅವರು ಹಾಜರಾಗಲಿಲ್ಲ. ಹಾಗೂ ಅವರಿಂದ ಯಾವುದೇ ಮಾಹಿತಿಯು ಬಂದಿರುವುದಿಲ್ಲ.

ಅವರ ಬಗ್ಗೆ ಯಾವುದೇ ಮಾಹಿತಿ ತಿಳಿಯದ ಕಾರಣ ಅವರಿಗೆ ಸರ್ಕಾರಿ ಸೇವೆಯಲ್ಲಿ ಆಸಕ್ತಿ ಇಲ್ಲದಿರುವುದು ದೃಢಪಟ್ಟಿರುತ್ತದೆ. ಆದಪ್ರಯುಕ್ತ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸದೆ ದಂಡನೆಯನ್ನು ವಿಧಿಸಲು ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958ರ ನಿಯಮ 108 ಹಾಗೂ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 14(ii) ರ ಹಾಗೂ ಅದೇ ನಿಯಮಾವಳಿಯ ನಿಯಮ 8(viii)ರಡಿಯಲ್ಲಿ ಶ್ರೀ ಸೈಯದ್ ನಜುಮುದ್ದೀನ್, ಅರ್ಥಶಾಸ್ತ್ರ ಆಯ್ಕೆ ಶ್ರೇಣಿ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಮಾಲೂರು ಇವರನ್ನು ಸೇವೆಯಿಂದ ವಜಾಗೊಳಿಸಲು ಸರ್ಕಾರವು ಉದ್ದೇಶಿಸಿ ಈ ಕೆಳಕಂಡಂತೆ ಆದೇಶಿಸಲು ನಿರ್ಣಯಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 92 ಡಿಸಿಇ 2006, ಬೆಂಗಳೂರು, ದಿನಾಂಕ: 29ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಶ್ರೀ ಸೈಯದ್ ನಜುಮುದ್ದೀನ್, ಅರ್ಥಶಾಸ್ತ್ರ ಆಯ್ಕೆ ಶ್ರೇಣಿ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಮಾಲೂರು ಇವರು ದಿನಾಂಕ: 22–04–2000 ರಿಂದ 03–12–2000 ಮತ್ತು 05–12–2000 ರಿಂದ ಇಲ್ಲಿಯವರೆವಿಗೂ ಸರ್ಕಾರಿ ಸೇವೆಗೆ ಅನಧಿಕೃತವಾಗಿ ಗೈರುಹಾಜರಾಗಿರುವುದಕ್ಕಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಗಳು, 1958ರ ನಿಯಮ 108 ಹಾಗೂ ಕರ್ನಾಟಕ ನಾಗರೀಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 14(ii) ರ ರೀತ್ಯ ಹಾಗೂ 8(viii)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತೆ ಸರ್ಕಾರಿ ನೌಕರಿಯ ಪ್ರವೇಶಕ್ಕೆ ಸಾಮಾನ್ಯವಾಗಿ ಅನರ್ಹತೆಯಾಗತಕ್ಕ ರೀತಿಯಲ್ಲಿ ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಮೇರಿ ಜಾಯ್ಸ್**
ಸರ್ಕಾರದ ಉಪ ಕಾರ್ಯದರ್ಶಿ,
ಶಿಕ್ಷಣ ಇಲಾಖೆ.(ಉನ್ನತ ಶಿಕ್ಷಣ).

ಪಿ.ಆರ್. 1000

**ವಿಷಯ:** 2006-2007ನೇ ಶೈಕ್ಷಣಿಕ ಸಾಲಿಗೆ ರೋಣ ದಿ. ರಾಜೀವ್‌ಗಾಂಧಿ ಎಜುಕೇಷನ್ ಸೊಸೈಟಿಯ ಆರ್.ಜಿ.ಇ. ಸೊಸೈಟೀಸ್ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನಲ್ ವಿದ್ಯಾರ್ಥಿ ಪ್ರಮಾಣದ ನಿರ್ಧರಣೆ.

**ಓದಲಾಗಿದೆ:**
1. ದಿನಾಂಕ:27.12.2003ರ ಸಂ. ಇಡಿ 236 ಯುಆರ್‌ಸಿ 2003 ಸರ್ಕಾರಿ ಆದೇಶ.
2. ದಿನಾಂಕ:21.12.2005 ಸಂ. F.SRO/NCTE/B.P.Ed/2005-06/4798ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
3. ದಿ:28.3.2006ರ ಸಂ.789/2005-06ರ ರೋಣದ ದಿ. ರಾಜೀವ್‌ಗಾಂಧಿ ಎಜುಕೇಷನ್ ಸೊಸೈಟಿಯ ಅಧ್ಯಕ್ಷರ ಪತ್ರ.
4. ದಿನಾಂಕ:3.10.2003ರ ಸಂ. ಕವಿ/ವಿಮಂ(ಸಂಯೋಜನೆ)/2003-04/3121ರ ಕುಲಸಚಿವರು, ಕರ್ನಾಟಕ ವಿಶ್ವವಿದ್ಯಾಲಯ ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗಿರುವ ಬಿ.ಇಡಿ/ಬಿ.ಪಿ.ಎಡ್ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್‌ಸಿಟಿಇ ಅಧಿನಿಯಮ 1993ರ 4ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿಇಡಿ ಕೋರ್ಸುಗಳಿಗೆ ವಿದ್ಯಾರ್ಥಿಗಳಿಗೆ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ (1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ರೋಣದ ದಿ. ರಾಜೀವ್‌ಗಾಂಧಿ ಎಜುಕೇಷನ್ ಸೊಸೈಟಿಯ ಆರ್.ಜಿ.ಇ. ಸೊಸೈಟೀಸ್ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್ ಕಾಲೇಜಿಗೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಬಿ.ಪಿ.ಎಡ್ ಕೋರ್ಸನ್ನು ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ: 21.12.2005ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಪಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 50(ಐವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ಪತ್ರದಲ್ಲಿ ಮೇಲ್ಕಂಡ ಟ್ರಸ್ಟಿನ ಅಧ್ಯಕ್ಷರು ಸದರಿ ಕಾಲೇಜಿನ ಬಿ.ಪಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಉಲ್ಲೇಖ (4)ರಲ್ಲಿರುವ ಪತ್ರದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕುಲಸಚಿವರು ಈ ಕಾಲೇಜಿನ ಬಿ.ಪಿ.ಎಡ್ ಕೋರ್ಸಿಗೆ 2006-07ನೇ ಸಾಲಿನಿಂದ ಸಂಯೋಜನೆಯನ್ನು ನೀಡಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ. ಆದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 54 ಯುಆರ್‌ಸಿ 2006, ಬೆಂಗಳೂರು, ದಿನಾಂಕ: 27ನೇ ಜೂನ್ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರದ (18)ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ರೋಣದ ದಿ. ರಾಜೀವ್‌ಗಾಂಧಿ ಎಜುಕೇಷನ್ ಸೊಸೈಟಿಯ ಆರ್.ಜಿ.ಇ. ಸೊಸೈಟೀಸ್ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್ ಕಾಲೇಜಿಗೆ 2006-2007ನೇ ಶೈಕ್ಷಣಿಕ ಸಾಲಿಗೆ ಅನುವಾಗುವಂತೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1001

**ಎಂ.ಪಿ. ಮಂಜನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

## REVENUE SECRETARIAT

**CORRIGENDUM No:RD 567 TNR 2005, Bangalore, dated: 23rd June 2006**

In Government Order No:RD 567 TNR 2005, dated :24.8.2005 and 8.11.2005 it is stated that "the compensation would be paid double the rates" For the above the following shall be substituted- "the compensation is paid as per CRF/NCCF norms with a matching contribution from the state Govt."

At the end of the said G.O. the following shall be inserted -"This order shall remain in force till 31.3.2006"

By Order and in the name of the Governor of Karnataka,

**M.S. DESAI**

P.R. 1002

Under Secretary to Government

Revenue Department (Disaster Management)

## ಕಂದಾಯ ಸಚಿವಾಲಯ

**ವಿಷಯ:** ಕರ್ನಾಟಕ ಪ್ರವಾಸಿ ಸೌಧದ ಕಟ್ಟಡದಲ್ಲಿ ಒಂದು ಕೊಠಡಿಯನ್ನು ಉಪಹಾರ ಗೃಹವನ್ನಾಗಿ ಮಾರ್ಪಡಿಸಿ, ಕ್ಯಾಂಟೀನ್ ತೆರೆಯುವ ಬಗ್ಗೆ .

**ಓದಲಾಗಿದೆ:** ಧಾರ್ಮಿಕ ದತ್ತಿ ಆಯುಕ್ತರವರ ಪತ್ರ ಸಂಖ್ಯೆ:ಎಡಿಎಂ/6/ಸಿಆರ್/114/2005-06 ದಿನಾಂಕ:20.6.2006.

**ಪ್ರಸ್ತಾವನೆ:**

ಮೇಲೆ ಓದಲಾದ ಧಾರ್ಮಿಕ ದತ್ತಿ ಆಯುಕ್ತರವರ ಪತ್ರದಲ್ಲಿ ಆಂಧ್ರಪ್ರದೇಶದ ತಿರುಮಲದಲ್ಲಿರುವ ಕರ್ನಾಟಕ ಪ್ರವಾಸಿ ಸೌಧದ ನವೀಕೃತ ಕಟ್ಟಡವನ್ನು ಮಾನ್ಯ ಮುಜರಾಯಿ ಸಚಿವರು ದಿನಾಂಕ:23.2.2006 ರಂದು ಪರಿವೀಕ್ಷಣೆ ಮಾಡಿದ ಸಂದರ್ಭದಲ್ಲಿ ಸದರಿ ಕಟ್ಟಡದಲ್ಲಿ ಉಪಹಾರ ಗೃಹದ ಸೌಲಭ್ಯವನ್ನು ಒದಗಿಸುವ ಸಲುವಾಗಿ ಒಂದು ಕೊಠಡಿಯನ್ನು ಉಪಹಾರ ಗೃಹವನ್ನಾಗಿ ಮಾರ್ಪಡಿಸಿ, ನಿಯಮಾನುಸಾರ ಟೆಂಡರ್ ಕರೆದು ಯಾತ್ರಿಕರ ಅನುಕೂಲಕ್ಕಾಗಿ ಒದಗಿಸಲು ಸೂಚಿಸಿದ್ದರು. ಅದರಂತೆ ದಿನಾಂಕ:8.5.2006 ರಂದು (1) ವಿಜಯ ಕರ್ನಾಟಕ ಮತ್ತು (2) ಈನಾಡು ದಿನ ಪತ್ರಿಕೆಗಳಲ್ಲಿ ಟೆಂಡರ್ ಕರೆಯಲಾಗಿ, 4 ಜನ ಮಾತ್ರ ಟೆಂಡರ್‌ನಲ್ಲಿ ಭಾಗವಹಿಸಿರುವುದಾಗಿಯೂ, ಸದರಿ 4 ಜನರಲ್ಲಿ ಅತ್ಯಧಿಕವಾಗಿರುವ ಮಾಹೆಯಾನ ಬಾಡಿಗೆ ಪ್ರತಿ ಮಾಹೆಗೆ ರೂ. 36,000/- ಗಳನ್ನು ಶ್ರೀ ಎಂ. ಮುನಿರೆಡ್ಡಿ, ತಿರುಮಲ ಇವರು ಸೂಚಿಸಿದ ಮೇರೆ ಟೆಂಡರ್‌ನ್ನು ಸ್ಥಿರೀಕರಿಸಲು ಧಾರ್ಮಿಕ ದತ್ತಿ ಆಯುಕ್ತರು ಪ್ರಸ್ತಾಪಿಸಿರುತ್ತಾರೆ.

ಧಾರ್ಮಿಕ ದತ್ತಿ ಆಯುಕ್ತರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ, ಈ ಕೆಳಕಂಡಂತೆ ಆದೇಶವನ್ನು ನೀಡಲಾಗಿದೆ.

**ಸರ್ಕಾರ ಆದೇಶ ಸಂಖ್ಯೆ: ಕಂಇ 23 ಮುಇವಿ 2005, ಬೆಂಗಳೂರು, ದಿನಾಂಕ: 28ನೇ ಜೂನ್ 2006**

ಆಂಧ್ರಪ್ರದೇಶ ತಿರುಮಲದಲ್ಲಿರುವ ಕರ್ನಾಟಕ ಪ್ರವಾಸಿ ಸೌಧದ ನವೀಕೃತ ಕಟ್ಟಡದಲ್ಲಿ ಒಂದು ಸಸ್ಯಹಾರ ಉಪಹಾರ ಗೃಹದ ಸೌಲಭ್ಯಗಳನ್ನು ಒದಗಿಸುವ ಸಲುವಾಗಿ 860 ಚದರ ಅಡಿ ಕಾರ್ಪೆಟ್ ಏರಿಯಾ ಉಳ್ಳ ಒಂದು ಕೊಠಡಿಯನ್ನು ಉಪಹಾರ ಗೃಹವನ್ನಾಗಿ ಮಾರ್ಪಡಿಸಿ ,ಯಾತ್ರಿಕರ ಅನುಕೂಲಕ್ಕಾಗಿ ಈ ಆದೇಶದ ಅನುಬಂಧದಲ್ಲಿ ಸೂಚಿಸಿದ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ಮಾಹೆಯಾನ ರೂ. 36,000/- ಗಳು ಎಂದು ಬಾಡಿಗೆ ನಿಗಧಿಪಡಿಸಿ, ಗುತ್ತಿಗೆ ಆಧಾರದ ಮೇಲೆ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎನ್. ಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ)

**Annexure to Government Order No. RD2, MSC 2006, Banglore Dated: 24th June 2006**

1) The Carpet Area of the canteen is 860 Sq. ft, for which the monthly rent has been fixed at Rs. 36, 000/- per month
2) The period of lease is for 3 years or till the demolition of the building whichever is earlier.
3) There shall be an enhancement of rent at the rate of 5% every year.
4) The lessee should obtain a required necessary license to run a Vegetarian Canteen from the competent authorities as per rules and produce to the Special Officer, Karnataka State Charities before the commencement of the cantten.
5) The Special Officer, Karnataka State Charities have the right to revoke the lease even before the expiry of term of lease, without assigning any reasons, if he deems un-fit under any circumstances, the tenant shall have no right to claim any compensation for their termination of this lease.
6) The lessee shall pay monthly rent in advance to the concerned Special Officer, Karnataka State Charities, Tirupati-Thirumala on or before 5th of each month, failing which 18 1/2% interest shall be recovered from the lessee.
7) The lessee shall make their own arrangements at their own cost for obtaining a separate line for water supply and a separate line electricity connection from respective department.
8) The consumption charges of water supply and electricity on commercial basis shall be paid by the lessee under his use to the respective Department regularly, failing which the arrears shall be recovered from the lessee for such of the periods with interest at 181/2% per annum out of his Security Deposit or as arrears of land revenue.
9) The lessee shall not assign or sub-let the premises or any other portion there of and also no additions and alterations shall be effected for dwelling purposes, etc.,
10) The premises should be kept clean and tidy and the canteen should be maintained in hygienic condition and he shall comply with the rules and by-laws of the T.T.D. authorities and any other conditions of the Special Officer, Karnataka State Charities, Thirumala - Thirupathi.
11) The lessee shall maintain the complaint book and shall make it available in a visible place in the premises and produced whenever demanded by the public.
12) The cateen shall be kept open to all members of the public without any restrictions based on community or caste and the lessee shall treat the customers very courteously. The lessee shall always kept decent and elegant furniture for the use of the customers.
13) The lessee shall prepare and sell the good quality of Tea, Coffee, Milk and eatables etc., in the canteen with correct weight and measures for food items at reasonable rates not exceeding the rates prevailing in the market of comparable standard. The rates shall be liable to be revised and fixation at any time by the Special Officer, Karnataka State Charities, Thirumala or its Higher authorities or his authorized representatives.
14) The lessee shall permit the Special Officer or his representative or his authorized person for inspection to enter upon the canteen at any time without any prior notice.
15) The lessee shall not remove any fixtures like, water supply, sanitary and electrical, etc., or cause any damages either to the structure or fixtures during his term. If any damages are caused, the cost of such damages shall be recovered from the tenant out of his Security Deposit or as arrears of Land Revenue.
16) The extra fixtures like electrical and water supply if any required shall be installed by the lessee at his own cost after obtaining permission from the respective competent authorities and remove them after his term at his own cost only after obtaining the written permission from the Special Officer, Thirumala Karnataka State Charities, Endowment Department, without causing any damage to the fixtures and structure.
17) The lessee shall vacate the canteen and its premises in good conditions immediately after the expiry of his term failing which the lessee shall pay the penal rent (i.e. double the higher rent for next term or double the rent for the present terms which ever is higher) for the un-sanctioned period and action shall be taken to evict him the help of police whenever the canteen and its premises is required by the Department. Even before the expiry of his term, the lessee shall vacate the premises from the date of issue of 15 days notice and the lessee shall not be entitled to claim any compensation on account of his termination and however no due certificate from the concerned officials of Electricity and water supply Department should be produced before vacation of premises.

18) In case, the lessee fail to adhere to the conditions of this agreement and fails to vacate the cantteen on the date of expiry of the term, the Special Officer, Karnataka State Charities,Thirumal-Thirupathi or his authorised person is entitled to evict the premises with the help of police without entering into any correspondence for vacating the canteen building.
19) No conditions or rules other than those provide herein shall be applicable.
20) Six months advance rent shall be refunded without interest to the tenant on termination of his contract unless forfeited to Government as herein before after obtaining " No Due Certificate" from the Special Officer,Karnataka State Charities, Thirumala.
21) In case Security Deposits are forfeited to Government due to failure to abide by the above conditions, no correspondence shall be entertained.
22) In all matter of disputes under the above conditions the decision of Karnataka State Government shall be final and legally binding.
23) The protection of Tenancy and Rent Control Act shall not be entertained other than the conditions of the Agreement.
24) The lessee shall pay six months rent as on advance before taking possession of the canteen building.
25) An agreement shall be prepared incorporating all the conditions specified above and it shall be executed by the lessee and lesser and it shall be got registered by the lessee.
26) Any other condition which shall be imposed by the Endowment Commissioner.

By Order and in the name of the Governor of Karnataka,

**H.N. PRASAD**

Under Secretary to Government

Revenue Department (Muzrai)

P.R. 1003

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಶ್ರೀ ಎಸ್. ಕೆ. ವಾಸುದೇವ್, ಪುರಾತತ್ವ ಸಂರಕ್ಷಣಾ ಅಭಿಯಂತರರು (ಅರಮನೆ ಕಟ್ಟಡಗಳ ವಿಭಾಗ) ಮೈಸೂರು ಇವರ ವಿರುದ್ಧ ಇಲಾಖಾ ವಿಚಾರಣೆ -ಮಂಡನಾಧಿಕಾರಿ ನೇಮಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ ಸಂಕಇ 109 ಕೆಎಂಯು 98 ದಿನಾಂಕ:1.6.99
2. ಸರ್ಕಾರಿ ಆದೇಶ ಸಂಖ್ಯೆ ಸಂಕಇ 109 ಕೆಎಂಯು 98 ದಿನಾಂಕ:1.2.2000
3. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಎಎಂ /ಇಎಸ್‌ಟಿ/1/44/ 2005-06 ದಿನಾಂಕ 20.12.2005 ಮತ್ತು 16.5.2006 ರ ಪತ್ರಗಳು

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಎಸ್. ಕೆ. ವಾಸುದೇವ್, ಪುರಾತತ್ವ ಸಂರಕ್ಷಣಾ ಅಭಿಯಂತರು, ಮೈಸೂರು ಇವರ ವಿರುದ್ಧ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳು (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 11ರ ಉಪಬಂಧಗಳಿಗನುಸಾರವಾಗಿ ವಿಚಾರಣೆಯನ್ನು ನಡೆಸುವ ಸಲುವಾಗಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದಲ್ಲಿ ಪತ್ರಾಂಕಿತ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಸೂರ್ಯನಾರಾಯಣ ಅವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಸೂರ್ಯನಾರಾಯಣ ಇವರನ್ನು ಮತ್ತೊಂದು ಪ್ರಕರಣದಲ್ಲಿ ಅಮಾನತ್ತಿನಲ್ಲಿಟ್ಟಿರುವುದರಿಂದ ನಿರ್ದೇಶಕರ ಪ್ರಸ್ತಾವನೆಯ ಮೇರೆಗೆ ಇವರ ಬದಲಿಗೆ ಶ್ರೀ ಕೆ.ಎಲ್. ಸಿದ್ದಲಿಂಗಪ್ಪ, ಲೆಕ್ಕಪತ್ರ ಅಧೀಕ್ಷಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಅವರ ಪತ್ರಗಳಲ್ಲಿ ಲೆಕ್ಕಪತ್ರ ಇಲಾಖೆಯಿಂದ ನಿಯೋಜನೆ ಮೇರೆಗೆ ಸೇವೆ ಸಲ್ಲಿಸುತ್ತಿದ್ದ ಶ್ರೀ ಸಿದ್ದಲಿಂಗಪ್ಪ ಇವರನ್ನು ಸದರಿ ಪ್ರಕರಣದಲ್ಲಿ ಮಂಡನಾಧಿಕಾರಿಯಾಗಿ ನೇಮಕಾತಿ ಮಾಡಲಾಗಿದ್ದು, ಸದರಿಯವರ ಸೇವೆಯನ್ನು ಮಾತೃ ಇಲಾಖೆಗೆ ಹಿಂದಿರುಗಿಸಿರುವುದರಿಂದ ಇವರ ಬದಲಾಗಿ ನಿರ್ದೇಶನಾಲಯದ ಲೆಕ್ಕ ಅಧೀಕ್ಷಕರಾದ ಶ್ರೀ ಎನ್.ಎಸ್. ಅನಂತಪದ್ಮನಾಭ್ ರಾವ್ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕಾತಿ ಮಾಡಬೇಕೆಂದು ಕೋರಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಂಕಇ 109 ಕೆಎಂಯು, 98 (ಭಾಗ-1), ಬೆಂಗಳೂರು, ದಿನಾಂಕ: 23ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಎಸ್. ಕೆ. ವಾಸುದೇವ, ಪುರಾತತ್ವ ಸಂರಕ್ಷಣಾ ಇಂಜಿನಿಯರ್, ಮೈಸೂರು ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಸಂಬಂಧ ಮಂಡನಾಧಿಕಾರಿಯನ್ನಾಗಿ ನೇಮಕಾತಿ ಮಾಡಲಾಗಿದ್ದು ಶ್ರೀ ಕೆ.ಎಲ್. ಸಿದ್ದಲಿಂಗಪ್ಪ, ಲೆಕ್ಕಪತ್ರ ಅಧೀಕ್ಷಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ಸೇವೆಯನ್ನು ಮಾತೃ ಇಲಾಖೆಗೆ ಹಿಂದಿರುಗಿಸಿರುವುದರಿಂದ ಇವರ ಬದಲಿಗೆ ಶ್ರೀ ಎನ್. ಎಸ್. ಅನಂತಪದ್ಮನಾಭ ರಾವ್, ಲೆಕ್ಕ ಅಧೀಕ್ಷಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ, ಮೈಸೂರು ಇವರನ್ನು ಮಂಡನಾಧಿಕಾರಿಯನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ನೇಮಕ ಮಾಡಲಾಗಿದೆ. ಉಳಿದಂತೆ ಸರ್ಕಾರಿ ಆದೇಶ ಸಂಖ್ಯೆ ಸಂಕಇ 109 ಕೆಎಂಯು 96 ದಿನಾಂಕ:1.6.99 ರ ಆದೇಶದಲ್ಲಿ ಯಾವ ವ್ಯತ್ಯಾಸವು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸಾಂಬಶಿವಂ**

ಪೀಠಾಧಿಕಾರಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಆಡಳಿತ ಕನ್ನಡ)

ಪಿ.ಆರ್. 1004

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಎ. ಎ. ಪಾರಶೆಟ್ಟಿ, ಸಹಾಯಕ ಅಭಿಯೋಗ ನಿರ್ದೇಶಕರು, ಇವರ ಕರ್ತವ್ಯಲೋಪ ಆರೋಪದ ಬಗ್ಗೆ ಮಾಡಿರುವ ಇಲಾಖಾ ವಿಚಾರಣೆಯನ್ನು ಕೈಬಿಡುವ ಬಗ್ಗೆ.

**ಓದಲಾಗಿದೆ :**
1. ಕಾರಣ ಕೇಳುವ ನೋಟೀಸು ಸಂಖ್ಯೆ : ಲಾ 24 ಪಿಪಿಇ 2002 ದಿನಾಂಕ 17–01–2003
2. ಶ್ರೀ ಎ. ಎ. ಪಾರಶೆಟ್ಟಿ, ಸಹಾಯಕ ಅಭಿಯೋಗ ನಿರ್ದೇಶಕರು, ಇವರ ಪ್ರತಿವಾದದ ಲಿಖಿತ ಹೇಳಿಕೆ ದಿನಾಂಕ 31.01.2003
3. ಸರ್ಕಾರಿ ಆದೇಶ ಸಂಖ್ಯೆ ಲಾ 24 ಪಿಪಿಇ 2002 ದಿನಾಂಕ 5–8–2003
4. ವಿಚಾರಣಾಧಿಕಾರಿಯವರ ವಿಚಾರಣಾ ವರದಿ ದಿ : 6–10–2004

**ಪ್ರಸ್ತಾವನೆ :–**

ಶ್ರೀ ಎ.ಎ. ಪಾರಶೆಟ್ಟಿ, ಸಹಾಯಕ ಅಭಿಯೋಗ ನಿರ್ದೇಶಕರು, ಬೆಳಗಾವಿಯ 3ನೇ ಜೆ. ಎಂ. ಎಫ್. ಸಿ ನ್ಯಾಯಾಲಯದಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ದಿನಾಂಕ 29.11.2001 ರಂದು ಶ್ರೀ ಎಂ.ಎಸ್. ತೀರ್ಥ, ಪೊಲೀಸ್ ಪೇದೆ ಸಂಖ್ಯೆ : 2155, ಬೆಳಗಾವಿ ಖಡೇಬಜಾರ್ ಆರಕ್ಷಕ ಠಾಣೆ ಇವರು ಸಾಕ್ಷಿದಾರರಿಗೆ ಸಾಕ್ಷಿ ನುಡಿಯುವ ಬಗ್ಗೆ ತಿಳಿಸುತ್ತಿದ್ದಾಗ ಸದರಿ ಪೊಲೀಸ್ ಪೇದೆಯ ತಲೆಗೆ ಹೊಡೆದು ಎದೆಯ ಮೇಲಿನ ಸಮವಸ್ತ್ರವನ್ನು ಹಿಡಿದೆಳೆದು ದೂಡಿರುತ್ತಾರೆ. ಸದರಿ ಪ್ರಕರಣ ಬೆಳಗಾವಿ ಖಡೇಬಜಾರ್ ಆರಕ್ಷಕ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ : 291ರಲ್ಲಿ ದಾಖಲಾಗಿದ್ದು ಬೆಳಗಾವಿ ಮಾರ್ಕೆಟ್ ಠಾಣೆಗೆ ಮೊಕದ್ದಮೆ ಸಂಖ್ಯೆ: 281/05 ವರ್ಗಾವಣೆಯಾಗಿರುವ ಬಗ್ಗೆ ಆರೋಪಿತ ಅಧಿಕಾರಿಯು ತಮ್ಮ ಮೇಲಧಿಕಾರಿಗೆ ವರದಿ ಸಲ್ಲಿಸದೇ ವಿಷಯವನ್ನು ಮುಚ್ಚಿಟ್ಟು ಕರ್ತವ್ಯಲೋಪ ಎಸಗಿ ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಗಳು 1966ರ ನಿಯಮ 3 (i) ರ ಉಪನಿಯಮ (ii) ಮತ್ತು (iii) ವನ್ನು ಸ್ಪಷ್ಟವಾಗಿ ಉಲ್ಲಂಘಿಸಿದ ಆರೋಪದ ಬಗ್ಗೆ ಮೇಲೆ ಕ್ರಮಾಂಕ (1) ರಲ್ಲಿ ಓದಲಾಗಿರುವ ಕಾರಣ ಕೇಳುವ ತಿಳುವಳಿಕೆ ಪತ್ರವನ್ನು ಜಾರಿ ಮಾಡಲಾಗಿತ್ತು.

ಮೇಲೆ ಕ್ರಮಾಂಕ 2ರಲ್ಲಿ ಓದಲಾಗಿರುವ ದಿನಾಂಕ 31.01.2003ರಲ್ಲಿ ಆರೋಪಿತ ಸರ್ಕಾರಿ ಅಧಿಕಾರಿ ಎ.ಎ.ಪಾರಶೆಟ್ಟಿ ಇವರು ತಮ್ಮ ಲಿಖಿತ ಪ್ರತಿವಾದದ ಹೇಳಿಕೆಯಲ್ಲಿ ಅವರ ಮೇಲೆ ಮಾಡಿರುವ ಆರೋಪಗಳನ್ನು ನಿರಾಕರಿಸಿ, ತಮ್ಮ ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸಲಾಗಿದೆ ಮತ್ತು ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಗಳು 1966ರ ನಿಯಮ 3(i)ರ ಉಪನಿಯಮ (ii) ಮತ್ತು (iii) ವನ್ನು ಉಲ್ಲಂಘಿಸಿರುವುದಿಲ್ಲ ಮತ್ತು ದುರ್ನಡತೆ ಎಸಗಿರುವುದಿಲ್ಲವೆಂದು ತಮ್ಮ ಮೇಲೆ ಮಾಡಲಾಗಿರುವ ಆರೋಪಗಳನ್ನು ನಿರಾಕರಿಸಿರುತ್ತಾರೆ.

ಮೇಲೆ ಕ್ರಮಾಂಕ (3) ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಸದರಿ ಆರೋಪಿತ ಸರ್ಕಾರಿ ಅಧಿಕಾರಿಯ ಮೇಲೆ ಮಾಡಲಾಗಿರುವ ಆರೋಪಗಳ ಸತ್ಯಾಸತ್ಯತೆಯ ಬಗ್ಗೆ ತಿಳಿಯಲು ಕರ್ನಾಟಕ ಸರ್ಕಾರ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)(ಸಿ) ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಯವರನ್ನು ನೇಮಿಸಿದ್ದು, ವಿಚಾರಣಾಧಿಕಾರಿಯವರು ತಮ್ಮ ವರದಿಯಲ್ಲಿ ಆರೋಪಿತ ಸರ್ಕಾರಿ ಅಧಿಕಾರಿಯ ಮೇಲೆ ಮಾಡಲಾಗಿರುವ ಆಪಾದನೆ–1 ಮತ್ತು ಆಪಾದನೆ–2 ರುಜುವಾತುಪಡಿಸುವಲ್ಲಿ ಮಂಡನಾಧಿಕಾರಿಯವರು ವಿಫಲರಾಗಿರುತ್ತಾರೆಂದೂ, ಆಪಾದನೆಗಳು ರುಜುವಾತಾಗಿರುವುದಿಲ್ಲವೆಂದೂ ವರದಿ ನೀಡಿರುತ್ತಾರೆ.

ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಒಇ 120 ಪಿಪಿಇ 2006, ಬೆಂಗಳೂರು, ದಿನಾಂಕ 07ನೇ ಜೂನ್ 2006**

ಶ್ರೀ ಎ. ಎ. ಪಾರಶೆಟ್ಟಿ, ಸಹಾಯಕ ಅಭಿಯೋಗ ನಿರ್ದೇಶಕರು, ಇವರ ಮೇಲೆ ಸಂಖ್ಯೆ 429/2001ರ ಪ್ರಕರಣದಲ್ಲಿ ಕರ್ತವ್ಯಲೋಪ ಎಸಗಿ ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಗಳು 1966ರ ನಿಯಮ 3(i)ರ ಉಪನಿಯಮ (ii) ಮತ್ತು (iii) ವನ್ನು, ಸ್ಪಷ್ಟವಾಗಿ ಉಲ್ಲಂಘಿಸಿರುತ್ತಾರೆ ಎಂಬ ಆರೋಪಗಳಿಂದ ಈ ಮೂಲಕ ಮುಕ್ತಗೊಳಿಸಲಾಗಿದೆ. ಆದರೆ ಇನ್ನು ಮುಂದೆ ಜಾಗರೂಕತೆಯಿಂದ ಕಾರ್ಯನಿರ್ವಹಿಸುವಂತೆ ಎಚ್ಚರಿಕೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 907

**ಆರ್. ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾ. ಮತ್ತು ಸು. ಮತ್ತು ಅಭಿಯೋಗಗಳು)

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ :** ನಗರಾಭಿವೃದ್ಧಿ ಇಲಾಖೆಯ ಸರ್ಕಾರದ ಪ್ರಧಾನಕಾರ್ಯದರ್ಶಿಯವರು ದಿನಾಂಕ : 7–6–2006 ಮತ್ತು 8–6–2006ರಂದು ನವದೆಹಲಿಗೆ ಹೋಗಿ ಬರಲು ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** 1) ಪ್ರ. ಕಾ. ರವರ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ ; ನಅಇ/ ಪ್ರಕಾ /50/06 ದಿನಾಂಕ : 6ನೇ ಜೂನ್ 2006.

**ಪ್ರಸ್ತಾವನೆ :–**

ನವದೆಹಲಿಯ ನಿರ್ಮಾಣ ಭವನದಲ್ಲಿ ದಿನಾಂಕ: 7ನೇ ಜೂನ್ 2006ರಂದು ನಡೆಯುವ "Working Group on Urban Transport including Mass Rapid Transport System for 11th five year plan" ಸಭೆಯಲ್ಲಿ ಭಾಗವಹಿಸುವ ಸಲುವಾಗಿ ಶ್ರೀಮತಿ ಲಕ್ಷ್ಮಿವೆಂಕಟಾಚಲಂ, ಭಾ.ಆ.ಸೇ., ಸರ್ಕಾರದ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ ಇವರು, ದಿನಾಂಕ : 7–6–2006ರಂದು

ನವದೆಹಲಿಗೆ ಹೋಗಿ ದಿನಾಂಕ : 8–06–2006ರಂದು ಹಿಂದಿರುಗಿ ಬರಲು ಸೂಕ್ತ ಆದೇಶವನ್ನು ಹೊರಡಿಸುವಂತೆ ಮೇಲೆ (1) ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಪ್ರಧಾನ ಕಾರ್ಯದರ್ಶಿಯವರ ಆಪ್ತಕಾರ್ಯದರ್ಶಿಯವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 12 ಸಮನ್ವಯ 2006, ಬೆಂಗಳೂರು ದಿನಾಂಕ : 6ನೇ ಜೂನ್ 2006**

ಶ್ರೀಮತಿ ಲಕ್ಷ್ಮಿವೆಂಕಟಾಚಲಂ, ಭಾ.ಆ.ಸೇ., ಸರ್ಕಾರದ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ ಇವರು, ನವದೆಹಲಿಯ ನಿರ್ಮಾಣ ಭವನದಲ್ಲಿ ದಿನಾಂಕ : 7–6–2006ರಂದು ನಡೆಯುವ ``Working Group on Urban Transport including Mass Rapid Transport System for 11th five year plan" ಸಭೆಯಲ್ಲಿ ಭಾಗವಹಿಸುವ ಸಲುವಾಗಿ ದಿನಾಂಕ : 7–06–2006ರಂದು ನವದೆಹಲಿಗೆ ವಿಮಾನದಲ್ಲಿ ಪ್ರಯಾಣ ಮಾಡಿ ದಿನಾಂಕ : 8–6–2006ರಂದು ಬೆಂಗಳೂರಿಗೆ ಹಿಂದಿರುಗಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಸದರಿ ಅಧಿಕಾರಿಗಳು ನಿಯಮಾನುಸಾರ ಪ್ರವಾಸ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

ಈ ಆದೇಶವನ್ನು ಮುಖ್ಯ ಕಾರ್ಯದರ್ಶಿಗಳ ಟಿಪ್ಪಣಿ ಸಂಖ್ಯೆ : ಸಿಎಸ್/2017/2006, ದಿನಾಂಕ : 3–6–2006ರಲ್ಲಿ ನೀಡಿರುವ ಅನುಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 896

**ಎಸ್. ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ (ಸಮನ್ವಯ)

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ :** ನಗರಾಭಿವೃದ್ಧಿ ಇಲಾಖೆಯ ಸರ್ಕಾರದ ಕಾರ್ಯದರ್ಶಿಯವರು ದಿನಾಂಕ : 2–6–2006 ರಂದು ನವದೆಹಲಿಗೆ ಹೋಗಿ ಬಂದಿರುವ ಬಗ್ಗೆ.

**ಓದಲಾಗಿದೆ :** 1) ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ ಇವರ ಟಿಪ್ಪಣಿ ದಿನಾಂಕ : 5–6–2006.

**ಪ್ರಸ್ತಾವನೆ :**

ನವದೆಹಲಿಯ ವಿಜ್ಞಾನ ಭವನದಲ್ಲಿ ``The Safe Buildings Imperatives" ಕಾರ್ಯಾಗಾರದಲ್ಲಿ ದಿನಾಂಕ : 2–6–2006 ರಂದು ಶ್ರೀ ಸುಭಾಷ್‌ಚಂದ್ರ ಭಾ.ಆ.ಸೇ., ಸರ್ಕಾರದ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ, ಇವರು ಭಾಗವಹಿಸುವ ಸಲುವಾಗಿ ನವದೆಹಲಿಗೆ ಹೋಗಿ ಬಂದಿರುವ ಬಗ್ಗೆ ಸೂಕ್ತ ಆದೇಶ ಹೊರಡಿಸುವಂತೆ ಮೇಲೆ ಓದಲಾದ (1)ರ ಟಿಪ್ಪಣಿಯಲ್ಲಿ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಯವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 12 ಸಮನ್ವಯ 2006, ಬೆಂಗಳೂರು ದಿನಾಂಕ : 6ನೇ ಜೂನ್ 2006**

ನವದೆಹಲಿಯ ವಿಜ್ಞಾನ ಭವನದಲ್ಲಿ ``The Safe Buildings Imperatives" ಕಾರ್ಯಾಗಾರದಲ್ಲಿ ದಿನಾಂಕ : 2–6–2006ರಂದು ಶ್ರೀ ಸುಭಾಷ್‌ಚಂದ್ರ ಭಾ.ಆ.ಸೇ., ಸರ್ಕಾರದ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ, ಇವರು ಭಾಗವಹಿಸಿ, ನವದೆಹಲಿಗೆ ವಿಮಾನದಲ್ಲಿ ಹೋಗಿ ಬಂದಿರುವುದಕ್ಕೆ ಸರ್ಕಾರದ ಘಟನೋತ್ತರ ಮಂಜೂರಾತಿ ನೀಡಲಾಗಿದೆ.

ಸದರಿ ಅಧಿಕಾರಿಯವರು ನಿಯಮಾನುಸಾರ ಪ್ರವಾಸ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

ಈ ಆದೇಶವನ್ನು ಮುಖ್ಯ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ : CS. 1641/2006 ದಿನಾಂಕ : 19–5–2006ರಲ್ಲಿ ನೀಡಿರುವ ಅನುಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 897

**ಎಸ್. ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ (ಸಮನ್ವಯ)

**ವಸತಿ ಸಚಿವಾಲಯ**

**ವಿಷಯ :** ಮೈಸೂರು ಜಿಲ್ಲೆ ಹೆಗ್ಗಡದೇವನಕೋಟೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಎಂ/1998, ದಿನಾಂಕ : 10–04–2000

**ಪ್ರಸ್ತಾವನೆ :–**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಮೈಸೂರು ಜಿಲ್ಲೆ, ಹೆಗ್ಗಡದೇವನಕೋಟೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ/48 /ಹೆಚ್‌ಎಎಸ್ 2006 ಬೆಂಗಳೂರು, ದಿನಾಂಕ : 25ನೇ ಮೇ 2006**

ಮೇಲ್ಕಂಡ ಸಂದರ್ಭದಲ್ಲಿ ಮೈಸೂರು ಜಿಲ್ಲೆ, ಹೆಗ್ಗಡದೇವನಕೋಟೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀ ಪುಟ್ಟಬಸವನಾಯಕ ಸದಸ್ಯರು
   1ನೇ ಮುಖ್ಯ ರಸ್ತೆ, , ಹೆಗ್ಗಡದೇವನಕೋಟೆ ಟೌನ್, ಮೈಸೂರು ಜಿಲ್ಲೆ.

2. ಶ್ರೀಮತಿ ತೇಜಾ ನರಸಿಂಹಶೆಟ್ಟಿ ಸದಸ್ಯರು
ಹೌಸಿಂಗ್ ಬೋರ್ಡ್ ಕಾಲೋನಿ, ಹೆಗ್ಗಡದೇವನಕೋಟೆ ಟೌನ್, ಮೈಸೂರು ಜಿಲ್ಲೆ.
3. ಶ್ರೀ ಮಹಮ್ಮದ್ ಶಫೀ ಉಲ್ಲಾ ಸದಸ್ಯರು
ಮುಸ್ಲಿಂ ಬ್ಲಾಕ್ , ಹೆಗ್ಗಡದೇವನಕೋಟೆ ಟೌನ್, ಮೈಸೂರು ಜಿಲ್ಲೆ.
4. ಶ್ರೀ ಹೆಚ್. ಆರ್. ಶ್ರೀನಿವಾಸ ರಾಜು ಸದಸ್ಯರು
ನಂ. 426, 1ನೇ ಮುಖ್ಯರಸ್ತೆ,, ಹೆಗ್ಗಡದೇವನಕೋಟೆ ಟೌನ್, ಮೈಸೂರು ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪಿ.ಆರ್. 878** **ಎಸ್. ಇಂದುಮತಿ**
ಪೀಠಾಧಿಕಾರಿ-2, ವಸತಿ ಇಲಾಖೆ .

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆಯಡಿ ಗುಲ್ಬರ್ಗ ಜಿಲ್ಲೆಯ 10 ಜೀತವಿಮುಕ್ತರಿಗೆ 2005-06ನೇ ಸಾಲಿನಲ್ಲಿ ಸಹಾಯಧನ ಬಿಡುಗಡೆ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ. ಗ್ರಾಅಪ, 15, ಆರ್‌ಬಿಎಲ್. 2004 ದಿನಾಂಕ. 21-01-2006.
2. ಗುಲ್ಬರ್ಗ ಜಿಲ್ಲಾಧಿಕಾರಿಗಳ ಪತ್ರ ಸಂ.ಕಂ.ಎಂಎಜಿ 337 2005-06/ 27458 ದಿನಾಂಕ. 24-02-2006
3. ಯಾದಗಿರಿ ಉಪ ವಿಭಾಗಾಧಿಕಾರಿಗಳ ಆದೇಶ ಸಂ. ದಂಡ/ ಜೀತವಿಮುಕ್ತಿ/ 9/2003-04 ದಿನಾಂಕ 1-03-2006.
4. ಸರ್ಕಾರದ ಸಮಸಂಖ್ಯೆಯ ಆದೇಶದ ದಿನಾಂಕ. 22-03-2006 ಹಾಗೂ 28-03-2006.

**ಪ್ರಸ್ತಾವನೆ :-**

ಜೀತಕಾರ್ಮಿಕರನ್ನು ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ನಂತರ, ಅವರುಗಳಿಗೆ ಕನಿಷ್ಠ ಆರ್ಥಿಕ ಸವಲತ್ತನ್ನು ಒದಗಿಸುವ ಉದ್ದೇಶದಿಂದ ರಾಜ್ಯ ಸರ್ಕಾರವು "ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆ" ಎಂಬ ಹೊಸ ಯೋಜನೆಯನ್ನು ರೂಪಿಸಿದ್ದು, ದಿನಾಂಕ. 21ನೇ ಜನವರಿ 2006 ರಿಂದ ಈ ಯೋಜನೆಯನ್ನು ರಾಜ್ಯಾದ್ಯಂತ ಜಾರಿಗೆ ತರಲಾಗಿದೆ. ಈ ಯೋಜನೆಯಡಿ ರೂಪಿಸಿರುವ ನಿರ್ದೇಶನದಂತೆ, ಜೀತಪದ್ಧತಿಯಿಂದ ಬಿಡುಗಡೆಗೊಳಿಸುವ ಪ್ರತಿ ಜೀತಕಾರ್ಮಿಕ/ಬಾಲ ಜೀತಕಾರ್ಮಿಕರಿಗೆ ಮಾಹೆಯಾನ ರೂ. 300.00ರಂತೆ ಸಹಾಯಧನವನ್ನು 24 ತಿಂಗಳುಗಳ ಅವಧಿಗೆ ಪಾವತಿಸಬೇಕಾಗುತ್ತದೆ.

2. ಮೇಲೆ ಓದಲಾದ ಕ್ರ.ಸಂ. (4)ರ ಆದೇಶಗಳಲ್ಲಿ ಗುಲ್ಬರ್ಗ ಜಿಲ್ಲೆಯ ಯಾದಗಿರಿ ತಾಲ್ಲೂಕಿನ ಎಲ್ಲೇರಿ ಗ್ರಾಮದ 10 ಜೀತವಿಮುಕ್ತರಿಗೆ ಈ ಯೋಜನೆಯಡಿ ಸಹಾಯಧನ ಒದಗಿಸಲು 2005-06ನೇ ಸಾಲಿನಲ್ಲಿ ಒಂದು ತಿಂಗಳ (ಮಾರ್ಚ್) ಅವಧಿಗೆ ಮಾತ್ರ ಒಟ್ಟು ರೂ. 3000.00 ಗಳ ಅನುದಾನವನ್ನು ಹಾಗೂ 2006-07ನೇ ಸಾಲಿನ ಎರಡು ತಿಂಗಳ (ಏಪ್ರಿಲ್ ಮತ್ತು ಮೇ) ಅವಧಿಗೆ ಒಟ್ಟು ರೂ. 6000.00ಗಳು ಸೇರಿ ಒಟ್ಟು ರೂ. 9000.00ಗಳ ಅನುದಾನವನ್ನು ಬಿಡುಗಡೆಗೊಳಿಸಲಾಗಿದೆ. ಹಾಲಿ ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ಈ ಯೋಜನೆಯಡಿ ಗುಲ್ಬರ್ಗ ಜಿಲ್ಲಾ ಪಂಚಾಯತಿಗೆ ಒದಗಿಸಿರುವ ಅನುದಾನ ರೂ. 2.00 ಲಕ್ಷ ಪೈಕಿ ರಾಜ್ಯದ ಪಾಲಿನ ಅನುದಾನ ರೂ. 1.00 ಲಕ್ಷಗಳಲ್ಲಿ ಸದರಿ 10 ಜೀತ ವಿಮುಕ್ತರುಗಳಿಗೆ 2006-07ನೇ ಸಾಲಿನ ಹತ್ತು ತಿಂಗಳುಗಳ (2006 ಜೂನ್‌ನಿಂದ 2007 ಮಾರ್ಚ್‌ವರೆಗೆ) ಅವಧಿಗೆ ಮಾಹೆಯಾನ ರೂ. 300.00 ರಂತೆ ಸಹಾಯಧನಕ್ಕಾಗಿ ತಗಲುವ ರೂ. 0.30 ಲಕ್ಷ ಅನುದಾನವನ್ನು ಬಿಡುಗಡೆಗೊಳಿಸಲು ಸರ್ಕಾರವು ನಿರ್ಧರಿಸಿರುತ್ತದೆ.

ಅದಕ್ಕಾಗಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ, ಗ್ರಾಅಪ, 6 ಆರ್‌ಬಿಎಲ್, 2006 ಬೆಂಗಳೂರು, ದಿನಾಂಕ 29ನೇ ಮೇ 2006.**

ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆ ಅನ್ವಯ ಗುಲ್ಬರ್ಗ ಜಿಲ್ಲೆ ಯಾದಗಿರಿ ತಾಲ್ಲೂಕು ಎಲ್ಲೇರಿ ಗ್ರಾಮದ 10 ಜೀತವಿಮುಕ್ತರಿಗೆ ತಲಾ ಮಾಹೆಯಾನ ರೂ. 300.00ರಂತೆ 2006-07ನೇ ಸಾಲಿನ ಹತ್ತು ತಿಂಗಳುಗಳ (2006 ಜೂನ್‌ನಿಂದ 2007 ಮಾರ್ಚ್‌ವರೆಗೆ) ಅವಧಿಗೆ ಸಹಾಯ ಧನ ಪಾವತಿಸಲು ಒಟ್ಟು ರೂ. 30,000.00ಗಳನ್ನು (ಮೂವತ್ತು ಸಾವಿರ ರೂಪಾಯಿಗಳು ಮಾತ್ರ) ಗುಲ್ಬರ್ಗ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗೆ ಬಿಡುಗಡೆ ಮಾಡಲು ಸರ್ಕಾರವು ಮಂಜೂರಾತಿ ನೀಡಿದೆ.

2. ಈ ಕಾರ್ಯಕ್ಕಾಗಿ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2230- ಕಾರ್ಮಿಕ ಮತ್ತು ಉದ್ಯೋಗ- 01-ಕಾರ್ಮಿಕ - 198- ಗ್ರಾಮ ಪಂಚಾಯತಿಗಳಿಗೆ ಸಹಾಯ-6-ಗ್ರಾಮಪಂಚಾಯತಿಗಳು-ಕೇಂದ್ರ ಪುರಸ್ಕೃತ ಯೋಜನೆ (ಜೀತದಾಳುಗಳ ಪುನರ್ವಸತಿ)-01- ಬ್ಲಾಕ್ ಅನುದಾನ (ಯೋಜನೆ)ಗೆ ಜಮಾ ಮಾಡತಕ್ಕದ್ದು.

3. ಸರ್ಕಾರದ ಆದೇಶ ಸಂ. ಗ್ರಾಅಪ. 15. ಆರ್‌ಬಿಎಲ್. 2004 ದಿನಾಂಕ. 21-01-06ರಲ್ಲಿನ ಎಲ್ಲಾ ಮಾರ್ಗಸೂಚಿಗಳನ್ನು ತಪ್ಪದೇ ಪಾಲಿಸತಕ್ಕದ್ದು.

4. ಈ ಆದೇಶವನ್ನು ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂ. ಗ್ರಾಅಪ/243/ ಪಿಬಿಎಸ್/06 ದಿನಾಂಕ. 8-5-2006ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್. ಶಾಂತರಾಜ್**
ಪಿ.ಆರ್. 873
ನಿರ್ದೇಶಕರು, ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ
ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

**Infrastructure Development Secretariat**

**Subject :** Consultancy Fee to iDeCK for preparation of Land use Plan at BIAI, Site -

**Read :**
1. Government Letter No. IDD 26 DIA 05, dated 26-11-05.
2. Letter No. iDeCK/ 51/2005-06/467 dated 12-8-2005.
3. Letter No. iDeCK/ 31/2005-06/996 dated 16-01-06.
4. Government Order No. IDD 147 IDM 2005 (P) dated 18-4-2006.

**PREAMBLE :**

Government of Karnataka in its letter dated 26-11-05 read at Sl.No.1 above had authorized iDeCK to prepare a land use plan for the 400 acres of land available with Government of Karnataka adjacent to the BIAL site. Accordingly, iDeCK had commenced the preparation of land use plan and as per the agreed terms vide their invoices enclosed in letter read at Sl.No.2 above, they have submitted their bills towards consultancy fee of Rs. 1,72,200/- which includes payment at two stages i.e. commissioning of assignment for Rs. 73,800.00 and Rs. 98,400/- on submission of land allocation statement. The iDeCK has submitted the land use plan allocation statement in January 2006. As the amounts could not be disbursed at two stages due to time spent on obtaining exemption under KTPP Act. This order is issued now to facilitate payment of the above mentioned fees.

**GOVERNMENT ORDER NO. IDD 17 DIA 2006, BANALORE; DT: 24th May 2006**

After careful examination, Government are pleased to release an amount of Rs. 1,72,200.00 (Rupees one lakh seventy two thousand and two hundred) only towards the fees for Land Use Plan of 400 acres of land available with Government of Karnataka at BIAL site at Devanahalli Rs. 73, 800-00(Rupees seventy three thousand and eight hundred) only on commissioning of assignment and Rs. 98,400.00 (Rupees ninety eight thousand and four hundred) only on submission of land allocation statement now.

2. This expenditure would be met from the funds available in the Head of Account 3451-00-190-1-06-059-Infrastructure Preliminary Studies - other expenditure (Plan) 2006-07.

3. The Chief Financial Officer of iDeCK would draw this amount on a payees receipt duly countersigned by the Under Secretary to Government, Infrastructure Development Department.

4. This order isssues in presuming the concurrence of accordance with Finance Department's G.O.No.FD 1 TFP 2003, dated 12-06-2003.

By order and in the name of the Governer of Karnataka

PR. 866

**T.B. RENUKAPRASAD**
Under Secretary to Government,
Infrastructure Development Department

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ :** ಚಿತ್ರದುರ್ಗ ಜಿಲ್ಲಾ ತರಬೇತಿ ಸಂಸ್ಥೆಯ ಕಟ್ಟಡ ನಿರ್ಮಾಣ ಕೈಗೊಳ್ಳಲು ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ** 1) ಆದೇಶ ಸಂಖ್ಯೆ: ಸಿಆಸುಇ 92 ಇ ಆತ 2003, ದಿನಾಂಕ 19–02–2005.

: 2) ಆಡಳಿತ ತರಬೇತಿ ಸಂಸ್ಥೆಯ ಪತ್ರ ಸಂಖ್ಯೆ : ಜಿತಆ (2) ವಿವ/ಬಿಎಲ್‌ಡಿ/101/1993–94, ದಿನಾಂಕ 02–04–2005 ಹಾಗೂ 20–10– 2005.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ 19ನೇ ಫೆಬ್ರವರಿ 2005ರ ಸರ್ಕಾರಿ ಆದೇಶದಲ್ಲಿ, ಚಿತ್ರದುರ್ಗ ಜಿಲ್ಲಾ ತರಬೇತಿ ಸಂಸ್ಥೆಯ ಕಟ್ಟಡದ ಕಾಮಗಾರಿಯನ್ನು 2004–05ನೇ ಸಾಲಿನಲ್ಲಿ ಒಟ್ಟು 130.00 ಲಕ್ಷ ರೂ.ಗಳ (ಆಡಳಿತ ಕಛೇರಿ ಹಾಗೂ ತರಬೇತಿ ಕಟ್ಟಡಗಳ ನಿರ್ಮಾಣಕ್ಕೆ 85.00 ಲಕ್ಷ ರೂ.ಗಳು ಹಾಗೂ ವಸತಿನಿಲಯ ಕಟ್ಟಡ ನಿರ್ಮಾಣಕ್ಕೆ 45.00 ಲಕ್ಷ ರೂ.ಗಳು) ಅಂದಾಜು ವೆಚ್ಚದಲ್ಲಿ ಲೋಕೋಪಯೋಗಿ ಇಲಾಖೆಯ ಮೂಲಕ ಕೈಗೊಳ್ಳಲು ಸರ್ಕಾರದ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ಆಡಳಿತ ತರಬೇತಿ ಸಂಸ್ಥೆಯ ದಿನಾಂಕ 02–04–2005 ಹಾಗೂ 20–10–2005ರ ಪತ್ರಗಳಲ್ಲಿ, ಮುಖ್ಯ ಇಂಜಿನಿಯರ್, ಬೆಂಗಳೂರು, ಇವರು ದಿನಾಂಕ 15–03–2005ರ ತಮ್ಮ ಪತ್ರದಲ್ಲಿ ಆಡಳಿತ ಮಂಜೂರಾತಿ ಕೋರಿ ಸಲ್ಲಿಸಿದ ಪ್ರಸ್ತಾವನೆಯಲ್ಲಿ ಕೇವಲ ಕಟ್ಟಡ ನಿರ್ಮಾಣದ ಪ್ರಸ್ತಾವನೆ ಇದ್ದು, ವಸತಿನಿಲಯದ ಕಟ್ಟಡ ನಿರ್ಮಾಣದ ಯಾವುದೇ ಪ್ರಸ್ತಾವನೆ ಇರುವುದಿಲ್ಲವೆಂದು ತಿಳಿಸಿರುವುದರಿಂದ, ಉಲ್ಲೇಖ (1)ರ ದಿನಾಂಕ 19–02–2005ರ ಸರ್ಕಾರಿ ಆದೇಶವನ್ನು ಭಾಗಶಃ ಮಾರ್ಪಡಿಸಿ, ಚಿತ್ರದುರ್ಗ ಜಿಲ್ಲಾ ತರಬೇತಿ ಸಂಸ್ಥೆಯ ಆಡಳಿತ ಕಛೇರಿ ಹಾಗೂ ತರಬೇತಿ ಕಟ್ಟಡಗಳ ನಿರ್ಮಾಣಕ್ಕೆ ರೂ. 130.00 ಲಕ್ಷಗಳನ್ನು ಖರ್ಚು ಮಾಡಲು ಆಡಳಿತಾತ್ಮಕ ಮಂಜೂರಾತಿಯನ್ನು ನೀಡಬೇಕೆಂದು ಕೋರಲಾಗಿದೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ದಿನಾಂಕ 19–02–2005ರಂದು ಹೊರಡಿಸಲಾಗಿದ್ದ ಸಂಖ್ಯೆ : ಸಿಆಸುಇ 92 ಇಆತ 2003ರ ಆದೇಶವನ್ನು ಭಾಗಶಃ ಮಾರ್ಪಡಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ : ಸಿಆಸುಇ 92 ಇಆತ 2003, ಬೆಂಗಳೂರು, ದಿನಾಂಕ: 26ನೇ ಮೇ 2006**

ಚಿತ್ರದುರ್ಗ ಜಿಲ್ಲಾ ತರಬೇತಿ ಸಂಸ್ಥೆಯ ಹೊಸ ಕಟ್ಟಡ ನಿರ್ಮಾಣದ ಕಾಮಗಾರಿಗೆ ಈಗಾಗಲೇ ಹೊರಡಿಸಿರುವ ಸಂಖ್ಯೆ : ಸಿಆಸುಇ 92 ಇಆತ 2003, ದಿನಾಂಕ 19–02–2005ರ ಆದೇಶವನ್ನು ಭಾಗಶಃ ಮಾರ್ಪಡಿಸಿ ಹಾಗೂ ಈ ಕಾಮಗಾರಿಗೆ 2004–05ನೇ ಸಾಲಿನ ಆಯವ್ಯಯದಲ್ಲಿ ಸೇರ್ಪಡೆಯಾಗಿರುವ ಅಂದಾಜು ಮೊತ್ತ ರೂ. 130.00 ಲಕ್ಷಗಳಿಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ

ಹಾಗೂ ಇನ್ನುಳಿದಂತೆ, ಆಡಳಿತ ತರಬೇತಿ ಸಂಸ್ಥೆಯ ವಸತಿ ಗೃಹಗಳ ನಿರ್ಮಾಣ ಕಾಮಗಾರಿಗೆ ಮುಂದಿನ ಆಯವ್ಯಯದಲ್ಲಿ ಸೂಕ್ತ ಅಂದಾಜಿನೊಂದಿಗೆ ಅಗತ್ಯ ಅನುದಾನವನ್ನು ಒದಗಿಸಿಕೊಳ್ಳುವ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳುವಂತೆ ಸಹ ತಿಳಿಸಲಾಗಿದೆ.

ಈ ಆದೇಶವನ್ನು, ಸಂಖ್ಯೆ:ಲೋಇ 5 ಬಿಜಿಎಂ 2006, ದಿನಾಂಕ 5ನೇ/6–04–2006ರ ಟಿಪ್ಪಣಿಯಲ್ಲಿ ಲೋಕೋಪಯೋಗಿ ಇಲಾಖೆಯು ನೀಡಿರುವ ಸಹಮತಿಯ ಮೇರೆಗೆ, ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಕೆ. ಅನಸೂಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ತರಬೇತಿ)

ಪಿ.ಆರ್. 858

## ಒಳಾಡಳಿತ ಸಚಿವಾಲಯ

**ವಿಷಯ :** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಬೆಳಗಾವಿ ಜಿಲ್ಲೆ ಸಂಕೇಶ್ವರದ ಸಿ. ಜೆ (ಕಿ.ವಿ) ಮತ್ತು ಜೆ. ಎಂ. ಎಫ್. ಸಿ ನ್ಯಾಯಾಲಯದ ಸಹಾಯಕ ಸರ್ಕಾರಿ ಅಭಿಯೋಜಕರ ಹಾಗೂ ಸಿಬ್ಬಂದಿ ವರ್ಗದವರ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ : ಲಾ 179 ಪಿಪಿಇ 2003, ದಿನಾಂಕ 19–04–2004

2) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ : ಡಿಪಿಎನ್/ಸಿಶಾಕ/222/96–97, ದಿನಾಂಕ 5–12–2005

**ಪ್ರಸ್ತಾವನೆ :–**

ಮೇಲೆ (1)ರಲ್ಲಿ ಓದಲಾಗಿರುವ ಸರ್ಕಾರಿ ಆದೇಶ ದಿನಾಂಕ 19ನೇ ಏಪ್ರಿಲ್ 2004ರ ಸರ್ಕಾರಿ ಆದೇಶದಲ್ಲಿ ಬೆಳಗಾವಿ ಜಿಲ್ಲೆ ಸಂಕೇಶ್ವರದ ಸಿ.ಜೆ (ಕಿ.ವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಇರುವ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಯಲ್ಲಿ ದಿನಾಂಕ 19–04– 2004ರಿಂದ ಜಾರಿಗೆ ಬರುವಂತೆ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಸೃಜಿಸಿ ಆದೇಶವನ್ನು ಹೊರಡಿಸಲಾಗಿದೆ.

| | | | | |
|---|---|---|---|---|
| 1. | ಸಹಾಯಕ ಸರ್ಕಾರಿ ಅಭಿಯೋಜಕರು | – | 1 | ಹುದ್ದೆ |
| 2. | ಬೆರಳಚ್ಚುಗಾರ–ವ–ಸಹಾಯಕರು | – | 1 | ಹುದ್ದೆ |
| 3. | ದಲಾಯತ್ | – | 1 | ಹುದ್ದೆ |

ಮೇಲೆ (2)ರಲ್ಲಿ ಓದಲಾಗಿರುವ 5ನೇ ಡಿಸೆಂಬರ್ 2005ರ ಪತ್ರದಲ್ಲಿ ಅಭಿಯೋಗ ನಿರ್ದೇಶಕರು ಸದರಿ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ 19–04–2005 ರಿಂದ 18–04–2007ರ ವರೆಗೆ ಮುಂದುವರೆಸುವ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

### ಸರ್ಕಾರದ ಆದೇಶ ಸಂಖ್ಯೆ: ಒಇ 950 ಪಿಪಿಇ 2005, ಬೆಂಗಳೂರು ದಿನಾಂಕ 31ನೇ ಮೇ 2006

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಬೆಳಗಾವಿ ಜಿಲ್ಲೆ ಸಂಕೇಶ್ವರದ ಸಿ.ಜೆ (ಕಿ.ವಿ) ಮತ್ತು ಜೆ. ಎಂ. ಎಫ್. ಸಿ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಇರುವ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಯಲ್ಲಿ ತಾತ್ಕಾಲಿಕವಾಗಿ ಸೃಜಿಸಿರುವ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ 19–04–2005 ರಿಂದ 18–04–2007 ರವರೆಗೆ ಅಥವಾ ಸದರಿ ನ್ಯಾಯಾಲಯ ಅಸ್ತಿತ್ವದಲ್ಲಿರುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರಿಗೆ ಮುಂದುವರೆಸಲು ಸರ್ಕಾರವು ಮಂಜೂರಾತಿ ನೀಡಿದೆ.

| | | | | |
|---|---|---|---|---|
| 1. | ಸಹಾಯಕ ಸರ್ಕಾರಿ ಅಭಿಯೋಜಕರು | – | 1 | ಹುದ್ದೆ |
| 2. | ಬೆರಳಚ್ಚುಗಾರ–ವ–ಸಹಾಯಕರು | – | 1 | ಹುದ್ದೆ |
| 3. | ದಲಾಯತ್ | – | 1 | ಹುದ್ದೆ |

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–07–1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು)

ಪಿ.ಆರ್. 851

## Urban Development Secretariat

**Subject :** Constitution of Apex Committee for supervision of the Relocating of the utility service lines of Bangalore Metro Rail.

**Read :** D.O. Letter No. BMRCL/MD/PS/06-07/1 Dt. 15-04-2006 received from Bangalore Metro Rail Corporation Ltd.,

**PREAMBLE :**

In the D.O. letter dated : 15-04-2006. Managing Director, Bangalore Metro Rail Corporation Ltd., has reported that the Union Cabinet has cleared the issue of gauge and competence of the state to legislate on Metro Rail first stage of section-I of Metro work has to be started in the first instance from Byappanahalli to M.G. Road. and that the Bangalore Metro Rail Corporation Ltd., had held discussions

with various Utilities on the relocation of utility services in 192 pier locations. It is necessary that for the relocation of the utilities - time schedule, physical location and cost are realistically determined. The process of relocation has to be monitored periodically and closely, such that the clear land is available for putting up the piers for viaducts in the next 3 to 4 months. This needs close attention and supervision at the higher levels of Utilities Therefore he has suggested to constitute the Apex committee under the Chairmanship of Chief Secretary to review the progress of relocation of the utilities and to give guidance and an Executive Committee under the Chairmanship of Managing Director, Bangalore Metro Rail Corporation Ltd., to monitor the implementation of shifting of utilities and render compliance to the directions given by the Apex Committee. Hence, the following Order.

**GOVERNMENT ORDER NO.UDD 81 BMR 2006, BANGALORE, DATED: 26th May 2006**

1. In the circumstances explained in the Preamble, Government are pleased to constitute the following Apex Committee :-

| | | |
|---|---|---|
| 1. | Chief Secretary | Chairman |
| 2. | Principal Secretary, Forest & Ecology Department | Member |
| 3. | Principal Secretary, Urban Development Department | Member |
| 4. | Principal Chief Conservator of Forests | Member |
| 5. | Commissioner, Bangalore Mahanagara Palike | Member |
| 6. | Chairman, BWSSB., Bangalore | Member |
| 7. | Managing Director, Karnataka Power Transit Corporation Ltd., Bangalore | Member |
| 8. | Managing Director, Bangalore Mahanagara Transport Corporation, Bangalore | Member |
| 9. | General Manager, BSNL, Bangalore | Member |
| 10. | Commissioner of Police, Bangalore | Member |
| 11. | Managing Director BESCOM, Bangalore | Member |
| 12. | Managing Director, Bangalore Metro Rail Corporation Ltd., | Member Convener |

2. The Apex Committee shall undertake the following activities :-

a) Give directions to the Utility organizations - to develop plans for diversion, preparation, preparation of estimates, etc., and its submissions to BMRCL undertaking of the work of shifting of utility lines, etc.

b) Coordinate with all utility organizations for smooth, efficient & expeditious shifting of various utilities simultaneously at one go.

c) Review the work of shifting and relocation, monthly.

The Apex Committee shall meet every month on Tuesday.

3. Further, the Government is also pleased to constitute an Executive Committee under the Chairmanship of the Managing Director, Bangalore Metro Rail Corporation which is as follows :-

| | | |
|---|---|---|
| 1. | Managing Director, Bangalore Metro Rail Corporation Ltd., | Chairman |
| 2. | Commissioner, Bangalore Mahanagara Palike | Member |
| 3. | Chairman, Bangalore Water Supply and Sewerage Board., Bangalore | Member |
| 4. | Managing Director, Karnataka Power Transit Corporation Ltd., Bangalore | Member |
| 5. | Managing Director, Bangalore Metropolitan Transport Corporation Bangalore | Member |
| 6. | Managing Director, BSNL, Bangalore | Member |
| 7. | Managing Director BESCOM, Bangalore | Member |
| 8. | Commissioner of Police, Bangalore | Member |

4. The functions of the Executive Committee shall be as follows :-

a) Draw up plans as directed by the Committee and process for approvals of the utilities

b) Monitor the progress of implementation

c) Ensure that there is no time over run /cost over run

5. The Executive Committee shall meet every Monday in the forenoon.

By order and in the name of the Governor or Karnataka

PR. 848

**V.R. ILKAL**

Under Secretary to Government, Urban Development Department

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ:** ಮಾನ್ಯ ವಸತಿ ಸಚಿವರ ಆಪ್ತ ಶಾಖೆಯಲ್ಲಿ ಅಸ್ಥಿತ್ವದಲ್ಲಿರುವ ಗ್ರೂಪ್ 'ಸಿ' ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಗ್ರೂಪ್ 'ಎ' ಹುದ್ದೆಗೆ ಉನ್ನತೀಕರಿಸುವ ಬಗ್ಗೆ

**ಓದಲಾಗಿದೆ:** ಮಾನ್ಯ ವಸತಿ ಸಚಿವರ ಟಿಪ್ಪಣಿ ಸಂಖ್ಯೆ: ವಸಕ/3/2005-06, ದಿ 17ನೇ ಫೆಬ್ರವರಿ 2006

**ಪ್ರಸ್ತಾವನೆ:**

ಮಾನ್ಯ ವಸತಿ ಸಚಿವರು ಮೇಲೆ ಓದಲಾದ ದಿನಾಂಕ: 17.2.2006ರ ಟಿಪ್ಪಣಿಯಲ್ಲಿ ಶ್ರೀ ಸಿ. ಹಲಗಾನಾಯಕ್. ಆಪ್ತ ಕಾರ್ಯದರ್ಶಿ ಗ್ರೇಡ್-2, ಕರ್ನಾಟಕ ಸರ್ಕಾರ ಸಚಿವಾಲಯ ಇವರನ್ನು ದಿ: 17.2.2006 ರಿಂದ ಜಾರಿಗೆ ಬರುವಂತೆ ತಮ್ಮ ಆಪ್ತ ಶಾಖೆಯಲ್ಲಿ ವಿಶೇಷಾಧಿಕಾರಿಯಾಗಿ ನೇಮಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಈ ಉದ್ದೇಶಕ್ಕಾಗಿ ಮಾನ್ಯ ವಸತಿ ಸಚಿವರ ಆಪ್ತ ಶಾಖೆಯಲ್ಲಿ ಪ್ರಸ್ತುತ ಲಭ್ಯವಿರುವ ಗ್ರೂಪ್ 'ಸಿ' ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಗ್ರೂಪ್ 'ಎ' ಹುದ್ದೆಯನ್ನಾಗಿ ಉನ್ನತೀಕರಿಸುವ ಅಗತ್ಯತೆಯನ್ನು ಮನಗಂಡು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 84 ಸಅಸೇ 2006, ಬೆಂಗಳೂರು, ದಿನಾಂಕ: 2ನೇ ಜೂನ್ 2006.**

ಶ್ರೀ ಸಿ. ಹಲಗಾನಾಯಕ್, ಆಪ್ತ ಕಾರ್ಯದರ್ಶಿ ಗ್ರೇಡ್-2, ಕರ್ನಾಟಕ ಸರ್ಕಾರ ಸಚಿವಾಲಯ ಇವರನ್ನು ಮಾನ್ಯ ವಸತಿ ಸಚಿವರ ವಿಶೇಷಾಧಿಕಾರಿಯನ್ನಾಗಿ ನೇಮಿಸುವ ಸಲುವಾಗಿ ಮಾನ್ಯ ಸಚಿವರ ಆಪ್ತ ಶಾಖೆಗೆ ಮಂಜೂರಾಗಿರುವ 4 ಗ್ರೂಪ್ 'ಸಿ' ಹುದ್ದೆಗಳಲ್ಲಿ ಒಂದು ಹುದ್ದೆಯನ್ನು ದಿನಾಂಕ: 17.2.2006 ರಿಂದ ಜಾರಿಗೆ ಬರುವಂತೆ ಹಾಗೂ ಶ್ರೀ ಸಿ. ಹಲಗಾನಾಯಕ್, ಆಪ್ತ ಕಾರ್ಯದರ್ಶಿ ಗ್ರೇಡ್-2, ಇವರ ಸೇವೆಯು ಮಾನ್ಯ ಸಚಿವರ ಆಪ್ತ ಶಾಖೆಯಲ್ಲಿ ಅವಶ್ಯವಿರುವವರೆಗೆ ಅಥವಾ ಮಾನ್ಯ ಸಚಿವರ ಪದಾವಧಿಯವರೆಗೆ ಅಥವಾ ಮುಂದಿನ ಆದೇಶವಿರುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೆ ಗ್ರೂಪ್ 'ಎ' ದರ್ಜೆಗೆ ಉನ್ನತೀಕರಿಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 884 ವೆಚ್ಚ-5.2006, ದಿನಾಂಕ 22.5.2006 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಅದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 883

**ಯು.ಪಿ.ಪ್ರಭು**

ಸರ್ಕಾರದ ಅಧಿನ ಕಾರ್ಯದರ್ಶಿ

ಸಿಬ್ಬಂದ್ದಿ ಮತ್ತು ಆಡಳಿತ ಸುಧಾರಣಾ ಇಲಾಖೆ ಸೇವೆಗಳು

**ENERGY SECRETARIAT**

**Sub:** Co-opting of Technical / Subject expert as member of the Adhoc Committee in the Energy Department for expenditing the clearance of outstanding Inspection Reports and Audit Objections.

**Read:** 1. Government order No: EN 76 PTC 2006(1) Dated: 01st March 2006.
2. O.M. No. FD 2 CAM 2004 Dated 19th March 2005 issued by Finance Department.
3. Letter No:A1 P1 A/5795 dated: 3.12.2005 from MD., KPCL, Bangalore.
4. Letter NO: KPTCL/B37/64/2005-06 Dated: 13th December 2005 from M.D. KPTCL, Bangalore.

**PREAMBLE:**

In the Government Order read at (1) above, the Energy Department has constituted an Ad-hoc committee with a view to expediting clearance of outstanding Inspection Reports and Audit Objections with the following members :

| | | |
|---|---|---|
| 1) | Principal Secretary to Government, Energy Department. | Chairman |
| 2) | Managing Director, KPTCL. | Member |
| 3) | Managing Director, KPCL. | Member |
| 4) | Secretary, KERC. | Member |
| 5) | Managing Director, KREDL. | Member |
| 6) | Managing Director, VVNL. | Member |
| 7) | Managing Director, BESCOM | Member |
| 8) | Managing Director, GESCOM | Member |
| 9) | Managing Director, MESCOM | Member |
| 10 | Managing Director, HESCOM | Member |
| 11) | Managing Director, CESCO. | Member |
| 12) | Chief Electrical Inspector to Govt. | Member |
| 13) | The Controller (A.M.) and Ex-officio Secretary to Government Finance Department | Member |
| 14) | Deputy Secretary (B&R) or any other representative of Finance Department | Member |
| 15) | Deputy Accountant General/Senior Deputy Accountant General nominated by Accountant General | Member |

In the O.M. read at (2) above the Finance Department has suggested to Co-opt a Technical or Subject as a member of Ad-hoc committee. The expert will attend the Ad-hoc committee meetings, study the nature of audit objections categorised by the Accountant General and advice the Chairman of the committee on the suitable measuares to be taken to accelarate the pace of clearing arrears of audit. The Technical / subject experts shall only be entitiled to an incidental expenditure of Rs. 250 per sitting. Apart from this they will not be entitiled any other allowance or facility. Accordingly proposal has been obtained from the KPCL and the KPTCL vide letters read at (3) and (4) above. The proposal has been examined and hence the order :

**GOVERNMENT ORDER NO. EN 76 PTC 2004 BANGALORE, DATED 03rd June 2006**

Government is pleased to reconstitute the Ad-hoc commitee for expediting the clearance of outstanding Inspection Reports and Audit Objections with the following composition.

| | | |
|---|---|---|
| 1) | Principal Secretary to Government, Energy Department. | Chairman |
| 2) | Managing Director, KPTCL. | Member |
| 3) | Managing Director, KPCL. | Member |
| 4) | Secretary, KERC. | Member |
| 5) | Managing Director, KREDL. | Member |
| 6) | Managing Director, VVNL. | Member |
| 7) | Managing Director, BESCOM | Member |
| 8) | Managing Director, GESCOM | Member |
| 9) | Managing Director, MESCOM | Member |
| 10 | Managing Director, HESCOM | Member |
| 11) | Managing Director, CESCO. | Member |
| 12) | Chief Electrical Inspector to Govet. | Member |
| 13) | The Controller (A.M.) and Ex-officio Secretary to Government Finance Department | Member |
| 14) | Deputy Secretary (B&R) or any other representative of Finance Department | Member |
| 15) | Deputy Accountant General/Senior Deputy Accountant General nominated by Accountant General | Member |
| 16) | Sri P.G.M. Nadagowda, Chief Engineer (Civil) (Retd), ``Chidambara Sadana, 99, DEE Enclave, near Godwin School, Kodigehalli Main Road, Bangalore-92. | Member (Technical Expert/ Subject Expert) |

The Member (Technical Expert/Subject Expert) of the above committee is entitiled to an incidental expenditure of Rs. 250/- (Rs. Two Hundred and Fifty) only per sitting. Apart from this The Member (Technical Expert/Subject Expert) is not entitiled to any other allowance or facility.

The above committee shall meet atleast once in 2 months and review for expenditious clearence of pending inspection report and Audit paras of the various Corporations and ESCOM's etc coming under the administrative control of the Energy Department.

By Order and in the Name of the Governor of Karanataka

P.R. 899

**Suresh. B. Krishnappanavar,**

Under Secretary to Government Energy Department.

**ಕಂದಾಯ ಸಚಿವಾಲಯ**

**ವಿಷಯ:** ಇನಾಂ ರದ್ದಿಯಾತಿ ಕಾಯ್ದೆಯನ್ವಯ ಧಾರ್ಮಿಕ ಸಂಸ್ಥೆಗಳಿಗೆ ನಿಗಧಿಪಡಿಸಿರುವ ತಸ್ತೀಕ್ ಮೊತ್ತವನ್ನು ಹೆಚ್ಚಿಸುವ ಕುರಿತು.

**ಓದಲಾಗಿದೆ:** 1) ಧಾರ್ಮಿಕ ದತ್ತಿ ಆಯುಕ್ತರವರ ಪತ್ರ ಸಂಖ್ಯೆ: ಎಡಿಎಂ/2/ಐಎನ್‌ಎ/21/ 2003–04 ದಿನಾಂಕ: 26ನೇ ಏಪ್ರಿಲ್ 2006

2) ಕಾರ್ಯದರ್ಶಿ,ಕಂದಾಯ ಇಲಾಖೆರವರ ಅಧ್ಯಕ್ಷತೆಯಲ್ಲಿ ದಿನಾಂಕ: 03ನೇ ಮೇ 2006 ರಂದು ನಡೆದ ಸಭಾ ನಡವಳಿ.

**ಪ್ರಸ್ತಾವನೆ:**

ಮೇಲೆ ಓದಲಾದ ಧಾರ್ಮಿಕ ದತ್ತಿ ಆಯುಕ್ತರವರ ಪತ್ರ ದಿನಾಂಕ: 26/04/2006ರಲ್ಲಿ ಕರ್ನಾಟಕ ಇನಾಂ ರದ್ದಿಯಾತಿ ಕಾಯಿದೆ 1955 ಮತ್ತು ಕರ್ನಾಟಕ ಹಲವು ಇನಾಂ ರದ್ದಿಯಾತಿ ಕಾಯಿದೆ 1977ರನ್ವಯ ಧಾರ್ಮಿಕ ಸಂಸ್ಥೆಗಳು ಹೊಂದಿದ್ದ ಇನಾಂ ಜಮೀನುಗಳು ಸರ್ಕಾರಕ್ಕೆ ವಿಹಿತವಾಗಿದ್ದರಿಂದ, ಇದಕ್ಕೆ ಪರಿಹಾರಾರ್ಥವಾಗಿ ತಸ್ತೀಕ್ ಭತ್ಯೆ ನಿಗಧಿಪಡಿಸಿ, ಸಂಸ್ಥೆಗಳು ಅಸ್ತಿತ್ವದಲ್ಲಿರುವವರೆಗೆ ಪಾವತಿಸಬೇಕಾಗಿರುತ್ತದೆ. ಸದರಿ ಕಾಯಿದೆಗಳನ್ವಯ ಹಲವಾರು ಸಂಸ್ಥೆಗಳು ನಿಗಧಿಪಡಿಸಿರುವ ತಸ್ತೀಕ್ ಮೊತ್ತವು ಅತೀ ಕಡಿಮೆಯಾಗಿದ್ದು, ದೇವಾಲಯದ ದೈನಂದಿನ ಪೂಜಾ ಕೈಂಕರ್ಯಗಳನ್ನು ನಡೆಸಲು ಕಷ್ಟಸಾಧ್ಯವಾಗಿರುವುದರಿಂದ ವಾರ್ಷಿಕ ರೂ.5999/–ಗಳಿಗಿಂತ ಕಡಿಮೆ ತಸ್ತೀಕ್ ನಿಗಧಿಯಾಗಿರುವಂತಹ ಸಂಸ್ಥೆಗಳಿಗೆ ರೂ. 6,000/–ಗಳಿಗೆ ಹೆಚ್ಚಿಸಿ, ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಮುಂದುವರೆಸುತ್ತಾ ಸರ್ಕಾರವು 2006-07ನೇ ಸಾಲಿನ ಆಯವ್ಯಯದಲ್ಲಿ ತಸ್ತೀಕ್ ಪಾವತಿಗಾಗಿ ರೂ. 2124.48 ಲಕ್ಷಗಳನ್ನು ಒದಗಿಸಲಾಗಿದೆ.

ಉಲ್ಲೇಖಿತ ಕ್ರಮ ಸಂಖ್ಯೆ: (2)ರ ದಿನಾಂಕ:03/05/2006ರಂದು ನಡೆದ ಸಭೆಯ ನಡವಳಿಯಂತೆ, ರಾಜ್ಯದಲ್ಲಿ ಧಾರ್ಮಿಕ ಮತ್ತು ಧರ್ಮಾದಾಯ ಸಂಸ್ಥೆಗಳ ವಾರ್ಷಿಕ ತಸ್ತೀಕ್ ಮೊತ್ತ ರೂ. 5,999/- ಗಳಗಿಂತ ಕಡಿಮೆ ಇರುವ ಸಂಸ್ಥೆಗಳಿಗೆ 2006-07ನೇ ಸಾಲಿನ ವರ್ಷದಿಂದ ವಾರ್ಷಿಕವಾಗಿ ರೂ.6,000/-ಗಳಿಗೆ ಹೆಚ್ಚಿಸಿ ಆದೇಶ ಹೊರಡಿಸಲು ಅನುಕೂಲವಾಗುವಂತೆ ಧಾರ್ಮಿಕ ದತ್ತಿ ಆಯುಕ್ತರು ಅಂತಹ ಸಂಸ್ಥೆಯನ್ನು ಗುರುತಿಸಿ, ಸರ್ಕಾರಕ್ಕೆ ಸಲ್ಲಿಸುವಂತೆ ತೀರ್ಮಾನಿಸಲಾಗಿದೆ. ನಂತರ ಸದರಿ ಪಟ್ಟಿಯ ಆಧಾರದ ಮೇಲೆ ಸರ್ಕಾರ ಆದೇಶ ಹೊರಡಿಸಿದ ನಂತರ ಧಾರ್ಮಿಕ ದತ್ತಿ ಆಯುಕ್ತರು ತಮ್ಮ ಹಂತದಲ್ಲಿ ತಸ್ತೀಕು ಬಿಡುಗಡೆ ಮಾಡಲು ಕ್ರಮ ಕೈಗೊಳ್ಳಲು ತೀರ್ಮಾನಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 03 ಮುತಬ 2006, ಬೆಂಗಳೂರು, ದಿನಾಂಕ: 16ನೇ ಜೂನ್ 2006**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ರಾಜ್ಯದಲ್ಲಿ ಧಾರ್ಮಿಕ ಮತ್ತು ಧರ್ಮಾದಾಯ ಸಂಸ್ಥೆಗಳಿಗೆ ವಾರ್ಷಿಕ ತಸ್ತೀಕು ಲೆಕ್ಕಶೀರ್ಷಿಕೆ "2075-00-101-1-01" ರಡಿ ರೂ.2124.48ಲಕ್ಷ ಒದಗಿಸಲಾಗಿದ್ದು, ಈ ಮೊತ್ತದಲ್ಲಿ ವಾರ್ಷಿಕ ತಸ್ತೀಕು ಮೊತ್ತ ರೂ. 5,999/-ಕ್ಕೆ ಕಡಿಮೆ ಇರುವ ಸಂಸ್ಥೆಗಳಿಗೆ ರೂ.6,000/- ಗಳಿಗೆ ತಸ್ತೀಕನ್ನು ಈ ಕೆಳಕಂಡ ಷರತ್ತನ್ನು ವಿಧಿಸಿ, ನಿಗಧಿಪಡಿಸಿ, ಮಂಜೂರು ಮಾಡಲು 2006-07ನೇ ಸಾಲಿನಿಂದ ಜಾರಿಗೆ ಬರುವಂತೆ ಅನುಮತಿ ನೀಡಿ ಆದೇಶಿಸಿದೆ.

**ಷರತ್ತುಗಳು**

1) ಧಾರ್ಮಿಕ ದತ್ತಿ ಆಯುಕ್ತರು ತಸ್ತೀಕು ಮೊತ್ತ ರೂ.6,000/-ಕ್ಕಿಂತ ಕಡಿಮೆ ಪಡೆಯುವ ಸಂಸ್ಥೆಯನ್ನು ಗುರುತಿಸಿ, ಸರ್ಕಾರಕ್ಕೆ ಸಂಸ್ಥೆಗಳ ವಿವರ ಸಲ್ಲಿಸತಕ್ಕದ್ದು.

2) ಸದರಿ ಸಂಸ್ಥೆಗಳಿಗೆ ಸರ್ಕಾರದಿಂದ ಅನುಮೋದನೆ ಪಡೆದ ನಂತರ ಧಾರ್ಮಿಕ ದತ್ತಿ ಆಯುಕ್ತರು ಅನುದಾನ ಬಿಡುಗಡೆ ಮಾಡಲು ಕ್ರಮ ಕೈಗೊಳ್ಳುವುದು.

3) ದೇವಸ್ಥಾನಕ್ಕೆ ರೂ. 6,000/ಕ್ಕಿಂತ ಕಡಿಮೆ ತಸ್ತೀಕು ಪಡೆಯುತ್ತಿದ್ದು. ದೇವಸ್ಥಾನದ ಆದಾಯ ರೂ. 10,000/- ಕ್ಕಿಂತ ಹೆಚ್ಚಿಗೆ ಇದ್ದಲ್ಲಿ, ಆ ಸಂಸ್ಥೆಯನ್ನು ತಸ್ತೀಕು ರೂ. 6,000- ಮಂಜೂರಾತಿ ಪ್ರಸ್ತಾವನೆಯಿಂದ ಹೊರತುಪಡಿಸುವುದು.

ಕರ್ನಾಟಕ ರಾಜ್ಯಪಾಲರ ಅಜ್ಞಾನುಸಾರ ಮತ್ತು ಅವರ ಹೇಸರಿನಲ್ಲಿ,

ಪಿ.ಆರ್. 950 **ಹೆಚ್.ಎನ್. ಪ್ರಸಾದ್**

ಸರ್ಕಾರದ ಅಧಿನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ)

**PERSONNEL AND ADMINISTRATIVE SECRETARIAT**
**CORRIGENDUM**
**No: DPAR 265 SAS 2006, Bangalore, dated 31st May, 2006**

In the Government Order No. DPAR 217 SAS 2003,dated 23-03-2005, relating to constitution of the Selection Committee for preparation of Select List of State Civil Service Officers and Non-State Civil Service Officers of Karnataka for Promotion/Selection to the IAS, the existing entry at (d) in the order portion shall be substituted by the following entry :

d) Principal Secretary/ Secretary to Government. D.P.& A.R. - Member

By Order and in the Name of the Governor of Karnataka

P.R. 941 **K. SUDHAKARA SHETTY**

Under Secretary to Government, DP&AR (Services-I)

**ENERGY SECRETARIAT**
**ADDENDUM**
**No: EN15 PPC2005, Bangalore, Dated 15th June 2006.**

In order portion of Government Order No. EN 15 PPC 2005 dated 1.12.2005 after para two, the Finance Department opinion vide its U.O. NOte No. FD RLG 10/2006 dated 2.6.2006, the following sentence shall be added and read as:

``Government will review the Guarantee limit after Five Years from the date of commercial operation''.

By Order and in the Name of the Governor of Karnataka

P.R. 939 **Suresh B. Krishnappanavar,**

Under Secretary to Government, Energy Department.

**ವಸತಿ ಸಚಿವಾಲಯ**

**ವಿಷಯ:** ಮೈಸೂರು ಜಿಲ್ಲೆ ಹೆಗ್ಗಡದೇವನಕೋಟೆ, ಸರಗೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂ.ವಇ/42/ಹೆಚ್ಎಎಂ/1998, ದಿನಾಂಕ 10-04-2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಮೈಸೂರು ಜಿಲ್ಲೆ, ಹೆಗ್ಗಡದೇವನಕೋಟೆ, ಸರಗೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/49/ಹೆಚ್‌ಎಎಸ್2006 ಬೆಂಗಳೂರು, ದಿನಾಂಕ: 15ನೇ ಮೇ 2006**

ಮೇಲ್ಕಂಡ ಸಂದರ್ಭದಲ್ಲಿ ಮೈಸೂರು ಜಿಲ್ಲೆ, ಹೆಗ್ಗಡದೇವನಕೋಟೆ, ಸರಗೂರು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀಮತಿ ಬೆಳಗಮ್ಮ ಸದಸ್ಯರು
   ಹರಿಜನ ಬೀದಿ, ಸರಗೂರು ಟೌನ್, ಹೆಗ್ಗಡದೇವನಕೋಟೆ ತಾಲ್ಲೂಕು, ಮೈಸೂರು ಜಿಲ್ಲೆ
2. ಶ್ರೀ ರಂಗನಾಥ ಸದಸ್ಯರು
   ಈಡಿಗರ ಬೀದಿ, ಸರಗೂ ಟೌನ್, ಹೆಗ್ಗೆಡದೇವನಕೋಟೆ ತಾಲ್ಲೂಕು, ಮೈಸೂರು ಜಿಲ್ಲೆ.
3. ಶ್ರೀ ರವೀಂದ್ರನಾಥ, ಎಸ್.ಜೆ. ಸದಸ್ಯರು
   ಜೈನರ ಬೀದಿ, ಸರಗೂರು ಪಟ್ಟಣ, ಹೆಗ್ಗೆಡದೇವನಕೋಟೆ ತಾಲ್ಲೂಕು, ಮೈಸೂರು ಜಿಲ್ಲೆ.
4. ಶ್ರೀ ರಂಗನಾಯ್ಕ ಸದಸ್ಯರು
   ವಿವೇಕಾನಂದ ನಗರ, ಸರಗೂರು ಪಟ್ಟಣ, ಹೆಗ್ಗೆಡದೇವನಕೋಟೆ ತಾಲ್ಲೂಕು, ಮೈಸೂರು ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 936

**ಎಸ್. ಇಂದುಮತಿ**

ಪೀಠಾಧಿಕಾರಿ–2, ವಸತಿ ಇಲಾಖೆ.

## ವಸತಿ ಸಚಿವಾಲಯ

**ವಿಷಯ:** ಕೋಲಾರ ಜಿಲ್ಲೆ ಬಂಗಾರಪೇಟೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂ.ವಇ42/ಹೆಚ್‌ಎಎಂ/1998,
ದಿನಾಂಕ: 10ನೇ ಏಪ್ರಿಲ್ 2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಕೋಲಾರ ಜಿಲ್ಲೆ, ಬಂಗಾರಪೇಟೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/53/ಹೆಚ್‌ಎಎಸ್2006 ಬೆಂಗಳೂರು, ದಿನಾಂಕ: 07 06 2006**

ಮೇಲ್ಕಂಡ ಸಂದರ್ಭದಲ್ಲಿ ಕೋಲಾರ ಜಿಲ್ಲೆ, ಬಂಗಾರಪೇಟೆ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀ ಎಸ್. ಅಶೋಕ್ ಕುಮಾರ್ ಸದಸ್ಯರು
   ನಂ.3484, ಸಿ.ರಹೀಂ ಕಾಪೌಂಡ್, ಬಂಗಾರಪೇಟೆ ಕೋಲಾರ ಜಿಲ್ಲೆ.
2. ಶ್ರೀ ನಯಿಮ್ ಪಾಷ ಸದಸ್ಯರು
   ನಂ.1549, 4ನೇ ಅಡ್ಡರಸ್ತೆ, ವಿಜಯನಗರ ಬಂಗಾರಪೇಟೆ, ಕೋಲಾರ ಜಿಲ್ಲೆ.
3. ಶ್ರೀ ಬಿ.ಎನ್. ರಾಜಶೇಖರ್, ಸದಸ್ಯರು
   ನಂ1101., ನಾರಾಯಣರಾವ್ ರಸ್ತೆ, ಬಂಆರಪೇಟೆ ಕೋಲಾರ ಜಿಲ್ಲೆ.
4. ಶ್ರೀಮತಿ ಕೆ.ಹೆಚ್. ಹೇಮಾವತಿ ಸದಸ್ಯರು
   ನಂ.1883, ಗೌತಮನಗರ, ಬಂಗಾತಪೇಟೆ, ಕೋಲಾರ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಅಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 935

**ಹೆಚ್. ಹನುಮಂತಯ್ಯ**

ಪೀಠಾಧಿಕಾರಿ–2, (ಪ್ರಭಾರ), ವಸತಿ ಇಲಾಖೆ.

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಕಾವೇರಿ ಕಾಡಾ ಮೈಸೂರು ಪ್ರಾಧಿಕಾರದಿಂದ ನೀಡುವ ತರಬೇತಿ ಶಿಬಿರದ ಭಾಗವಹಿಸುವ ಅತಿಥಿ ಉಪನ್ಯಾಸಕರುಗಳಿಗೆ ಗೌರವಧನ ಹೆಚ್ಚಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ನೀಇ 17 ಎಂಪಿ.ಪಿ.ಎಸ್ 90, ದಿನಾಂಕ: 17ನೇ ಸೆಪ್ಟಂಬರ್ 1992.
2. ಸರ್ಕಾರದ ಆದೇಶ ಸಂಖ್ಯೆ:ಜಸಂಇ 12 ಇಂಸಂಕೆ 2001, ದಿನಾಂಕ: 25–2–2002.
3. ಕಾವೇರಿ ಕಾಡಾ ಆಡಳಿತಾಧಿಕಾರಿಯವರ ಪತ್ರ ಸಂಖ್ಯೆ: ಕಾಡಾ/ಕಾಜಯೋ/ ಸಇಂ 1/ಗೌ.ಧ/2005–06, ದಿನಾಂಕ: 28ನೇ ಸೆಪ್ಟಂಬರ್ 2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಕೃಷ್ಣರಾಜಸಾಗರ ಇಂಜಿನಿಯರಿಂಗ್ ಸಿಬ್ಬಂದಿ ಕಾಲೇಜಿಗೆ ಆಹ್ವಾನಿಸಲಾಗುವ ಅತಿಥಿ ಉಪನ್ಯಾಸಕರುಗಳಿಗೆ $1^{1/2}$ ಗಂಟೆಯ ಒಂದು ಉಪನ್ಯಾಸಕ್ಕೆ ರೂ 150–00 ಸಂಭಾವನೆ ನೀಡಲು ಹಾಗೂ ಅದಕ್ಕೆ ಸಾಧ್ಯವಾದ ಮಟ್ಟಿಗೆ ರಾಜ್ಯದಲ್ಲಿ ಮತ್ತು ರಾಷ್ಟ್ರಮಟ್ಟದಲ್ಲಿ ಖ್ಯಾತರಾದ ಅನುಭವ ಉಪನ್ಯಾಸಕರುಗಳ ಸೇವೆಯನ್ನು ಪಡೆದುಕೊಳ್ಳಲು ಮಂಜೂರಾತಿ ನೀಡಲಾಗಿದೆ. ನಂತರ ಮೇಲೆ ಓದಲಾದ(2)ರ ಸರ್ಕಾರದ ಆದೇಶದಲ್ಲಿ ಸಂಭಾವನೆಯನ್ನು ರೂ, 150–00 ರಿಂದ ರೂ, 200–00ಕ್ಕೆ ಹೆಚ್ಚಿಸಲಾಗಿರುತ್ತದೆ.

ಕಾವೇರಿ ಕಾಡಾ ಆಡಳಿತಾಧಿಕಾರಿಯವರು ಮೇಲೆ ಓದಲಾದ(3)ರ ತಮ್ಮ ಪತ್ರದಲ್ಲಿ ದಿನಾಂಕ 17ನೇ ಸೆಪ್ಟಂಬರ್ 1992 ಮತ್ತು 25ನೇ ಫೇಬ್ರವರಿ 2002ರ ಮೇಲಿನ ಆದೇಶಗಳನ್ನು ಉಲ್ಲೇಖಿಸಿ, ಸದರಿ ತರಬೇತಿ ಶಿಬಿರದಲ್ಲಿ ಉಪನ್ಯಾಸ ನೀಡಲು ನುರಿತ ಉಪನ್ಯಾಸಕರು ಈ ಸಂಭಾವನೆ ಮೊತ್ತವು ಕಡಿಮೆ ಇರುವುದರಿಂದ ಆಸಕ್ತಿ ತೋರಿಸದೇ ತರಬೇತಿ ಶಿಬಿರಗಳನ್ನು ಸಾರ್ಥಕ ರೀತಿಯಲ್ಲಿ ಏರ್ಪಡಿಸುವುದು ಕಷ್ಟವಾಗುತ್ತಿದೆಯೆಂದು, ತರಬೇತಿ ಶಿಬಿರಗಳು ಸಮಂಜಸ ಮತ್ತು ಸಾರ್ಥಕವಾಗಬೇಕಾಗಿರುವುದರಿಂದ ಕಾಡಾ ಪ್ರಾಧಿಕಾರದಿಂದ ಏರ್ಪಡಿಸುವ ತರಬೇತಿ ಶಿಬಿರಗಳಲ್ಲಿ ಭಾಗವಹಿಸುವ ಅತಿಥಿ ಉಪನ್ಯಾಸಕರಿಗೆ ರೂ. 300-00 ಸಂಭಾವನೆ ನಗದಿಪಡಿಸುವುದು ಸೂಕ್ತವೆಂದು, ಅದರಂತೆ ಸರ್ಕಾರದ ಆದೇಶವನ್ನು ಹೊರಡಿಸಲು ಕೋರಿರುತ್ತಾರೆ. ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಜಸಂಇ 40 ಸಿಎಂಜಿ 2005, ಬೆಂಗಳೂರು, ದಿನಾಂಕ:05ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕಾವೇರಿ ಜಲಾನಯನ ಯೋಜನೆ, ಮೈಸೂರು ಕಾಡಾ ಪ್ರಾಧಿಕಾರದಿಂದ ನೀಡುವ ತರಬೇತಿ ಶಿಬಿರಗಳಲ್ಲಿ ಭಾಗವಹಿಸುವ ಅತಿಥಿ ಉಪನ್ಯಾಸಕರಿಗೆ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದ ವರೆಗೆ ಒಂದೂವರೆ ($1^{1/2}$) ಗಂಟೆ ಅವದಿಯ ಒಂದು ಉಪನ್ಯಾಸಕ್ಕೆ ರೂ.200/- ರಿಂದ ರೂ 300-00ಗಳನ್ನು ನೀಡಲು ಸರ್ಕಾರವು ಮಂಜೂರಾತಿಯನ್ನು ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಅನಧಿಕೃತ ಟಿಪ್ಪಣಿ ಸಂಖ್ಯೆ:ಲೋಇ 606 ಆಕೋ- 3/05, ದಿನಾಂಕ 22. ಮೇ 2006ರನ್ವಯ ಹೊಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 931 **ಸುಂದರ ರಾಜ ಗುಪ್ತ,**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಕಾಡಾ),

**ಸಹಕಾರ ಸಚಿವಾಲಯ**

**ವಿಷಯ:** ಮಹಾಮಂಡಳದ 2004-05ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ದಿನಾಂಕ 1.4.2006 ರಿಂದ 31.3.2007ರ ಒಂದು ವರ್ಷದ ಅವಧಿಯವರೆಗೆ ವಿಸ್ತರಿಸಿ, ಮುಂದೂಡಿ ನಡೆಸಲು ಅನುಮತಿ ಕರಿತು

**ಓದಲಾಗಿದೆ:** ಕೈಮಗ್ಗ ಮತ್ತು ಜವಳಿ ಇಲಾಖೆಯ ಪತ್ರ ಸಂಖ್ಯೆ ಕೈಜಿಇ/ಜಂ.ರಿ.ಟಿ3/ಕಾಹ್ಯಾ/ವಾಮಸ/23/2005-06 ದಿನಾಂಕ 31ನೇ ಮಾರ್ಚ್ 2006

**ಪ್ರಸ್ತಾವನೆ:**

ಕೈಮಗ್ಗ ಮತ್ತು ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿ, ಕರ್ನಾಟಕ ಸಹಕಾರ ಕೈಮಗ್ಗ ನೇಕಾರರ ಮಹಾ ಮಂಡಳ ನಿಯಮಿತ (ಕಾವೇರಿ ಹ್ಯಾಂಡ್‌ಲೂಮ್ಸ್) ಇದರ ಆರ್ಥಿಕ ಪರಿಸ್ಥಿತಿ ಕ್ಲಿಷ್ಟಕರವಾದುದರಿಂದ ಸರ್ಕಾರದ ಅದಿಸೂಚನೆ ದಿನಾಂಕ 27ನೇ ಅಕ್ಟೋಬರ್ 2005ರಲ್ಲಿ 2004-05ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ದಿನಾಂಕ 30ನೇ ಮಾರ್ಚ್ 2006ರವರೆಗೆ ವಿಸ್ತರಿಸಲಾಗಿತ್ತು. ಪ್ರಸ್ತುತ ಸಂಸ್ಥೆಯ ಆರ್ಥಿಕ ಪರಿಸ್ಥಿತಿ ಸುಧಾರಿಸಿರುವುದಿಲ್ಲ ಹಾಗೂ ಮಹಾ ಮಂಡಲದ ಸಿಬ್ಬಂದಿಯವರಿಗೆ ವೇತನವನ್ನು ಪಾವತಿಸದೆ ಇರುವ ಅಂಶಗಳನ್ನು ಪರಿಶೀಲಿಸಿ ಮಹಾಮಂಡಳವು ಕೋರಿರುವಂತೆ 2004-05ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ಪುನ: ದಿನಾಂಕ 1ನೇ ಏಪ್ರಿಲ್ 2006ರಿಂದ 31ನೇ ಮಾರ್ಚ್ 2007ರವರೆಗೆ ಒಂದು ವರ್ಷದ ಅವಧಿಗೆ ಮುಂದೂಡುವ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 121ರನ್ವಯ ಮುಂದೂಡುವ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಸಇ 35 ಸಿಐಎಂ 2006 ಬೆಂಗಳೂರು, ದಿನಾಂಕ 27ನೇ ಮೇ 2006**

ಕರ್ನಾಟಕ ಸಹಕಾರ ಸಂಘಗಳ ಅದಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಕರ್ನಾಟಕ ಸಹಕಾರ ಕೈಮಗ್ಗ ನೇಕಾರರ ಮಹಾ ಮಂಡಳನಿಯಮಿತ (ಕಾವೇರಿ ಹ್ಯಾಂಡ್‌ಲೂಮ್ಸ್) ಇದರ 2004/05ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ 31ನೇ ಮಾರ್ಚ್ 2007ರವರೆಗೆ ಕಾಲಾವಕಾಶ ನೀಡಲು ಕರ್ನಾಟಕ ಸಹಕಾರ ಸಂಘಗಳ ಅದಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳು ಈ ಕೆಳಗಿನ ಮಾರ್ಪಾಡುಗಳೊಂದಿಗೆ ಅನ್ವಯವಾಗುತ್ತದೆ ಎಂದು ನಿರ್ದೇಶಿಸುತ್ತದೆ. ಎಂದರೆ

**27ರ ಪ್ರಕರಣದಲ್ಲಿ**

27ನೇ ಪ್ರಕರಣದ ಉಪ ಪ್ರಕರಣ (1) ಪರಂತುಕದಲ್ಲಿನ ಆರು ತಿಂಗಳು ಎಂಬ ಪದಗಳಿಗೆ ಬದಲಾಗಿ 18 ತಿಂಗಳು ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ**

ಪ್ರಕರಣ 27(1)ಕ್ಕೆ ಮಾಡಿದ ಮಾರ್ಪಾಡು ದಿನಾಂಕ 31ನೇ ಮಾರ್ಚ್ 2007ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವದಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದಂತೆ ಸದರಿ 27(1)ಕ್ಕೆ ಪ್ರಕರಣದ ಉಪಬಂಧಕಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೇಸರಿನಲ್ಲಿ,

ಪಿ.ಆರ್. 921 **ಬಾಣದ ರಂಗಪ್ಪ,**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ತಿದ್ದುಪಡಿ ಆದೇಶ**

ಶ್ರೀ.ಸಿ.ಆರ್. ಲಕ್ಷಣ ರಾವ್, ದ್ವಿತೀಯ ದರ್ಜೆ ಸಹಾಯಕ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಕೋಲಾರ ಇವರ ಮೇಲಿನ ಆಪಾದನೆಯನ್ನು ಕೈಬಿಟ್ಟು ಅವರನ್ನು ದೋಷಮುಕ್ತಗೊಳಿಸಲು ಹೊರಡಿಸಿದ ಆದೇಶ ಸಂಖ್ಯೆ:ಗ್ರಾಅಪ 90 ಇಎನ್‌ಕ್ಯೂ 2000,ರಲ್ಲಿ ನಮೂದಿಸಿರುವ ದಿ: 03ನೇ ಮೇ 2005 ಎಂಬುದನ್ನು ದಿ: 3ನೇ ಮಾರ್ಚ್ 2006 ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 915 **ಎಸ್.ಸಿ. ಸುಂದರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ರಮೇಶ್ ಪಿ. ಭಾರಸ್ಕಳೆ, ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ. ಇವರ ವಿರುದ್ಧ ಪ್ರಾರಂಭಿಸಿರುವ ಇಲಾಖಾ ವಿಚಾರಣೆಯಲ್ಲಿ ವಿಚಾರಣಾಧಿಕಾರಿಯನ್ನು ಮಾರ್ಪಡಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂ:ಮಮಇ 489 ಎಸ್‌ಜೆಡಿ 2004. ದಿ:6.12.2004

2. ಶ್ರೀ ಎನ್. ಅನಂತಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರ ದಿ:6.7.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂ:[1]ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ರಮೇಶ್ ಪಿ. ಭಾರಸ್ಕಳೆ, ಉಪನಿರ್ದೇಶಕರು [ಸುಧಾರಣೆ] ಪಿಡಿಎಂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ [ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು] ನಿಯಮಗಳು, 1957ರ ನಿಯಮ 11ರಡಿಯಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಲು ಹಾಗೂ ಶ್ರೀ ಎನ್. ಅನಂತಮೂರ್ತಿ, ನಿವೃತ್ತಿ ಜಿಲ್ಲಾ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಗಳು ಮತ್ತು ಜಂಟಿ ನಿರ್ದೇಶಕರು ಆಡಳಿತ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂ:[2] ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣಾಧಿಕಾರಿಯಾದ ಶ್ರೀ ಎನ್. ಅನಂತಮೂರ್ತಿ ಇವರು ವಿಚಾರಣೆ ದಿ:15.5.2005ರಂದು ಆರೋಪಿತ ಅಧಿಕಾರಿ ಶ್ರೀ ರಮೇಶ್ ಪಿ. ಭಾರಸ್ಕಳೆ ಇವರು ವಿಚಾರಣಾಧಿಕಾರಿಗಳಾದ ತನ್ನ ನಿಷ್ಪಕ್ಷಪಾತದ ಬಗ್ಗೆ ವಿನಾಕಾರಣ ಆಕ್ಷೇಪಿಸಿದ್ದು, ಈ ವರ್ತನೆ ಖಂಡನಾರ್ಹವಾಗಿದ್ದು, ಮುಂದಿನ ವಿಚಾರಣೆ ದಿನಗಳಲ್ಲಿ ಇದೇ ರೀತಿಯ ವರ್ತನೆಯನ್ನು ಪ್ರದರ್ಶಿಸುವ ಸಾಧ್ಯತೆ ಇರುವ ಕಾರಣ ತಮ್ಮ ನೇಮಕಾತಿಯನ್ನು ರದ್ದುಗೊಳಿಸಬೇಕೆಂದು ಕೋರಿರುತ್ತಾರೆ.

ಯಾವುದೇ ಇಲಾಖಾ ವಿಚಾರಣೆಯಲ್ಲಿ ಸಂಬಂಧಪಟ್ಟ ಆರೋಪಿತ ಅಧಿಕಾರಿಯು ಅನುಚಿತವಾಗಿ ವರ್ತಿಸದೆ ಜವಾಬ್ದಾರಿಯುತವಾಗಿ ನಡೆದುಕೊಳ್ಳ ಬೇಕಾಗುತ್ತದೆ. ಅನುಚಿತವಾಗಿ ವರ್ತಿಸಿದಲ್ಲಿ ಸದರಿ ವರ್ತನೆಯ ಕುರಿತು ಹೆಚ್ಚುವರಿಯಾಗಿ ಆರೋಪವನ್ನು ಹೊರಿಸಿ ಇದನ್ನು ಒಳಗೊಂಡಂತೆ. ಇಲಾಖಾ ವಿಚಾರಣೆ ನಡೆಸಿ ಶಿಸ್ತು ಪ್ರಾಧಿಕಾರಕ್ಕೆ ವಿಚಾರಣಾಧಿಕಾರಿಯು ವರದಿಯನ್ನು ಸಲ್ಲಿಸಬಹುದಾಗಿರುತ್ತದೆ.

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಜಂಟಿನಿರ್ದೇಶಕರು [ಆಡಳಿತ]ಹುದ್ದೆಯನ್ನು ಅಪರ ನಿರ್ದೇಶಕರು [ಆಡಳಿತ] ಎಂದು ಮರು ಪದನಾಮೀಕರಿಸಿರುವುದರಿಂದ ಮೇಲೆ ಕ್ರಮ ಸಂ: [1] ರಲ್ಲಿ ಓದಲಾದ ಆದೇಶದಲ್ಲಿ ಮಂಡನಾಧಿಕಾರಿಯನ್ನಾಗಿ ನೇಮಿಸಿರುವ ಜಂಟಿ ನಿರ್ದೇಶಕರು [ಆಡಳಿತ] ಇವರನ್ನು ಮಾರ್ಪಡಿಸುವ ಅವಶ್ಯಕತೆ ಸಹ ಇರುತ್ತದೆ.

ಪ್ರಸ್ತುತ ಪ್ರಕರಣದಲ್ಲಿ ವಿಚಾರಣಾಧಿಕಾರಿಯು ತನ್ನ ನೇಮಕಾತಿಯನ್ನು ರದ್ದುಗೊಳಿಸುವಂತೆ ಕೋರಿರುವುದರಿಂದ ನಿಯಮ 11 [5] [ಸಿ] ಮತ್ತು ನಿಯಮ 11 [22] ರನ್ವಯ ಕೂಲಕಂಷವಾಗಿ ಪರಿಶೀಲಿಸಿ ಈ ಕೆಳಗೆ ಸೂಚಿಸಿದಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂ:ಮಮಇ 489 ಎಸ್‌ಜೆಡಿ 2003, ಬೆಂಗಳೂರು, ದಿನಾಂಕ: 31ನೇ ಮೇ 2006**

ಶ್ರೀ ರಮೇಶ್ ಪಿ. ಭಾರಸ್ಕಳೆ, ಉಪನಿರ್ದೇಶಕರು [ಮಹಿಳಾ ಕಲ್ಯಾಣ], ಪ್ರಸ್ತುತ ಉಪನಿರ್ದೇಶಕರು [ಸುಧಾರಣೆ], ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಅನುಮೋದನೆ ನೀಡಿ ಹೊರಡಿಸಿರುವ, ಸರ್ಕಾರಿ ಆದೇಶ ಸಂ:ಮಮ ಇ 489 ಎಸ್‌ಜೆಡಿ 2004 ದಿ:6.12.2004ನ್ನು ಭಾಗಶಃ ಮಾರ್ಪಡಿಸಿ ಕರ್ನಾಟಕ ನಾಗರೀಕ ಸೇವಾ [ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು] ನಿಯಮಗಳು 1957ರ

ನಿಯಮ 11[22] ರೊಂದಿಗೆ ಓದಿಕೊಂಡು, ನಿಯಮ 11[2] ರನ್ವಯ ಶ್ರೀ ಎನ್. ಅನಂತಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರ ಬದಲಿಗೆ ಶ್ರೀ ಟಿ.ಎಸ್. ಪಾಲನೇತ್ರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ, ಮತ್ತು

ನಿಯಮ 11[5][ ಸಿ] ರನ್ವಯ "ಜಂಟಿ ನಿರ್ದೇಶಕರು ಆಡಳಿತ " ಬದಲಿಗೆ " ಜಂಟಿ ನಿರ್ದೇಶಕರು/ ಅಪರ ನಿರ್ದೇಶಕರು ಆಡಳಿತ" ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ವಿಚಾರಣಾಧಿಕಾರಿಯು ವಿಚಾರಣೆಯನ್ನು ಪ್ರಸ್ತುತ ಹಂತದಿಂದ ಮುಂದುವರೆಸಿ ಮೂರು ತಿಂಗಳೊಳಗೆ ವರದಿಯನ್ನು ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 903

**ವಿ. ಶಿವಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ (-2), ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಸಿ.ವೈ. ಇಲ್ಲೂರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಮರುನೇಮಕಾತಿ ಮಾಡಿರುವುದಕ್ಕೆ ಷರತ್ತು ಮತ್ತು ನಿಬಂಧನೆಗಳು.

**ಓದಲಾಗಿದೆ:** 1. ಅಧಿಸೂಚನೆ ಸಂಖ್ಯೆ:ಸಿಆಸುಇ 82 ಸೇಲೋಯು 2005, ದಿನಾಂಕ:14.11.2005.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:14.11.2005ರ ಅಧಿಸೂಚನೆಯಲ್ಲಿ ಶ್ರೀ ಸಿ.ವೈ ಇಲ್ಲೂರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ 6 ತಿಂಗಳ ಅವಧಿಗೆ ಮಾತ್ರ ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಖಾಲಿಯಿರುವ ಅಪರ ನಿಬಂಧಕರು (ವಿಚಾರಣೆಗಳು) ಹುದ್ದೆಗೆ ಗುತ್ತಿಗೆ ಆಧಾರದ ಮೇಲೆ ಮರು ನೇಮಕಾತಿ ಮಾಡಲಾಗಿತ್ತು. ಶ್ರೀ ಇಲ್ಲೂರ್ ದಿನಾಂಕ:28.2.2006ರ ವರೆಗೆ ಮಾತ್ರ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸಿದರು. ಅವರು ಕಾರ್ಯ ನಿರ್ವಹಿಸಿದ ಅವಧಿಗೆ ವೇತನ ಮತ್ತು ಭತ್ಯೆಗಳ ನಿಗದಿ ಹಾಗೂ ಷರತ್ತು ಮತ್ತು ನಿಬಂಧನೆಗಳನ್ನು ನಿಗದಿಪಡಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶದ ಸಂಖ್ಯೆ: ಸಿಆಸುಇ 82 ಸೇಲೋಯು 2005, ಬೆಂಗಳೂರು, ದಿನಾಂಕ:27ನೇ ಮೇ 2006**

ಶ್ರೀ ಸಿ.ವೈ, ಇಲ್ಲೂರ ಇವರನ್ನು ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಖಾಲಿಯಿದ್ದ ಅಪರ ನಿಬಂಧಕರು (ವಿಚಾರಣೆಗಳು) ಹುದ್ದೆಯಲ್ಲಿ ಗುತ್ತಿಗೆ ಆಧಾರದ ಮೇಲೆ 17.11.2005ರಿಂದ ಮರುನೇಮಕಾತಿ ಮಾಡಲಾಗಿದ್ದು ಅವರು 28.2.2006ರ ವರೆಗೆ ಕಾರ್ಯನಿರ್ವಹಿಸಿದ್ದಾರೆ. ಈ ಅವಧಿಗೆ ಮರುನೇಮಕಾತಿ ವೇತನವನ್ನು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಯ ನಿಯಮ 313 (ಬಿ) ಪ್ರಕಾರ ಮಾಸಿಕ ರೂ. 8,488/ (ಎಂಟು ಸಾವಿರದ ನಾಲ್ಕು ನೂರ ಎಂಭತ್ತೆಂಟು ರೂಪಾಯಿಗಳು ಮಾತ್ರ) ನಿಗದಿಪಡಿಸಿದೆ. ಈ ಮರುನೇಮಕಾತಿ ವೇತನದೊಂದಿಗೆ ಶ್ರೀಯುತರು ನಿವೃತ್ತಿಯ ಸಮಯದಲ್ಲಿ ಪಡೆಯುತ್ತಿದ್ದ ಅಂತಿಮ ಮೂಲವೇತನವಾದ ರೂ. 20,050/ ಗಳಿಗೆ ಕಾಲಕಾಲಕ್ಕೆ ಲಭ್ಯವಾಗುವ ತುಟ್ಟಿಭತ್ಯೆ, ಮನೆ ಬಾಡಿಗೆ ಭತ್ಯೆ ಹಾಗೂ ನಗರ ಪರಿಹಾರ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ. ಆದರೆ ನಿವೃತ್ತಿ ವೇತನದ ಮೇಲಿನ ತುಟ್ಟಿಭತ್ಯೆಯನ್ನು ಪಡೆಯುವಂತಿಲ್ಲ. ನಿವೃತ್ತಿ ನಂತರದ ಸೇವೆಯನ್ನು ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲಾಗುವುದಿಲ್ಲ. ಇವರ ಮರುನೇಮಕಾತಿಗೆ ಷರತ್ತು ಮತ್ತು ನಿಬಂಧನೆಗಳನ್ನು ಇದರೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ನಿಗದಿಪಡಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 766 ವೆಚ್ಚ -5:2006, ದಿನಾಂಕ:11.5.2006ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ರಾಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವಾ ನಿಯಮಗಳು-2.)

## ಅನುಬಂಧ

## ಗುತ್ತಿಗೆ ಆಧಾರದ ಮರುನೇಮಕಾತಿಯ ಬಗ್ಗೆ ಷರತ್ತು ಮತ್ತು ನಿಬಂಧನೆಗಳು

1. ಶ್ರೀ ಸಿ.ವೈ. ಇಲ್ಲೂರ್ ರವರ ಗುತ್ತಿಗೆ ನೇಮಕಾತಿ ಅವಧಿಯು ದಿನಾಂಕ:17.11.2005ರಿಂದ 28.2.2006ರ ಅವಧಿಯವರೆಗೆ.

2. ಶ್ರೀ ಸಿ.ವೈ. ಇಲ್ಲೂರ್ ಇವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ ರೂ.8,488/- ಮರುನೇಮಕಾತಿ ವೇತನವನ್ನು ಪಡೆಯಲು ಅರ್ಹರಿರುತ್ತಾರೆ. ಈ ವೇತನದ ಜೊತೆಗೆ ಅವರು ನಿವೃತ್ತಿ ಹೊಂದುವಾಗ ಪಡೆಯುತ್ತಿದ್ದ ಮೂಲ ವೇತನದ ಮೇಲೆ ಕಾಲಕಾಲಕ್ಕೆ ಲಭ್ಯವಾಗುವ ತುಟ್ಟಿಭತ್ಯೆ, ಮನೆ ಬಾಡಿಗೆ ಭತ್ಯೆ, ನಗರ ಪರಿಹಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ. ಆದರೆ ಅವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿಭತ್ಯೆ ಸೇರಿದಂತೆ ಯಾವುದೇ ಇತರ ಭತ್ಯೆಗಳು ಲಭ್ಯವಿರುವುದಿಲ್ಲ.

3. ಸದರಿ ಗುತ್ತಿಗೆ ನೌಕರರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

4. ಸದರಿ ಗುತ್ತಿಗೆ ನೌಕರರುಗಳು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆ ಮತ್ತು ಕೆ.ಸಿ.ಎಸ್.ಆರ್ಸ್. ನಿಯಮ 150ರ ಪ್ರಕಾರ ಗಳಿಕೆ ರಜೆ ಪಡೆಯಲು ಅರ್ಹರಾಗಿರುತ್ತಾರೆ.

5. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನ ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.

6. ಸದರಿ ನೌಕರರ ದುರ್ವರ್ತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.

7. ಸದರಿ ಮರುನೇಮಕಾತಿ ಅವಧಿಯ ಸೇವೆಯನ್ನು ನಿವೃತ್ತಿ ವೇತನ ಹಾಗೂ ಇತ್ಯಾದಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವುದಿಲ್ಲ.

8. ಅವರ ಕರ್ತವ್ಯ, ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ಅವರು ನೆರವೇರಿಸುವುದು.

9. ಅವರು ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.

10. 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.

11. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.

12. ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಮತ್ತು ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಅವರು ಸರ್ಕಾರಕ್ಕೆ ತುಂಬಿಕೊಡಲು ಹೊಣೆಯಾಗಿರುತ್ತಾರೆ.

13. ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು (ರೂ.50-00) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ರಾಮ**

ಪಿ.ಆರ್. 831

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವಾ ನಿಯಮಗಳು-2.)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಜಲ ಸಂಪನ್ಮೂಲ ಇಲಾಖೆಯಲ್ಲಿನ ಬೃಹತ್ ನೀರಾವರಿ ಯೋಜನೆಗಳ ನಿಯಂತ್ರಣಾ ಮಂಡಳಿಯನ್ನು ಪುನರ್ ರಚಿಸುವ ಬಗ್ಗೆ

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ:ಜಸಂಇ 60 ಎನ್‌ಪಿಸಿ 2004, ದಿನಾಂಕ:23.8.2004

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಜಲಸಂಪನ್ಮೂಲ ಇಲಾಖೆಯಲ್ಲಿನ ಬೃಹತ್ ನೀರಾವರಿ ಯೋಜನೆಗಳ ನಿಯಂತ್ರಣಾ ಮಂಡಳಿಯನ್ನು ರಚಿಸಲಾಗಿತ್ತು. ರಾಜ್ಯದಲ್ಲಿ ಹೊಸ ಸರ್ಕಾರಕ್ಕೆ ಅಸ್ತಿತ್ವಕ್ಕೆ ಬಂದಿರುವ ಹಿನ್ನೆಲೆಯಲ್ಲಿ , ಸದರಿ ಬೃಹತ್ ನಿರಾವರಿ ಯೋಜನೆಗಳ ನಿಯಂತ್ರಣಾ ಮಂಡಳಿಯನ್ನು ಪುನರ್ ರಚಿಸಲು ಸಕಾರವು ತೀರ್ಮಾನಿಸಿರುತ್ತದೆ. ಅದರಂತೆ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

### ಸರ್ಕಾರದ ಆದೇಶ ಸಂಖ್ಯೆ:ಜಸಂಇ 15 ಎನ್‌ಪಿಸಿ 2006, ಬೆಂಗಳೂರು, ದಿನಾಂಕ: 5ನೇ ಜೂನ್ 2006

ಜಲ ಸಂಪನ್ಮೂಲ ಇಲಾಖೆಯಲ್ಲಿನ ಬೃಹತ್ ನೀರಾವರಿ ಯೋಜನೆಗಳ ನಿಯಂತ್ರಣಾ ಮಂಡಳಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ಈ ಕೆಳಕಂಡಂತೆ ಪುನರ್ ರಚಿಸಲಾಗಿದೆ:

1. ಮಾನ್ಯ ಮುಖ್ಯ ಮಂತ್ರಿಗಳು -ಅಧ್ಯಕ್ಷರು
2. ಮಾನ್ಯ ಜಲ ಸಂಪನ್ಮೂಲ ಸಚಿವರು - ಉಪಾಧ್ಯಕ್ಷರು

**ಅಧಿಕಾರಿ ಸದಸ್ಯರು**

1. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ.
2. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಜಲ ಸಂಪನ್ಮೂಲ ಇಲಾಖೆ.
3. ಸರ್ಕಾರದ ಕಾರ್ಯದರ್ಶಿಗಳು, ಜಲ ಸಂಪನ್ಮೂಲ ಇಲಾಖೆ.
4. ಸರ್ಕಾರದ ಕಾರ್ಯದರ್ಶಿಗಳು, ಕಾನೂನು ಇಲಾಖೆ.
5. ಪ್ರಧಾನ ಇಂಜಿನಿಯರ್, ಜಲ ಸಂಪನ್ಮೂ ಅಭಿವೃದ್ಧಿ ಸಂಸ್ಥೆ, ಬೆಂಗಳೂರು.
6. ಸರ್ಕಾರದ ಉಪ ಕಾರ್ಯದರ್ಶಿಗಳು(ಕೆಬಿಜೆಎನ್), -ಸದಸ್ಯ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ

**ಅಧಿಕಾರೇತರ ಸದಸ್ಯರು**

1. ಶ್ರೀ ಕೆ.ಸಿ. ರೆಡ್ಡಿ, ನಿವೃತ್ತ ಆಯುಕ್ತರು, ಲೋಕೋಪಯೋಗಿ ಇಲಾಖೆ, ಹಾಗೂ ಮಾನ್ಯ ಮುಖ್ಯ ಮಂತ್ರಿಗಳ ಸಲಹೆಗಾರರು, ವಿಧಾನ ಸೌಧ, ಬೆಂಗಳೂರು.
2. ಶ್ರೀ ವಿ. ಕೃಷ್ಣಮೂರ್ತಿ, ನಿವೃತ್ತ ಕಾರ್ಯದರ್ಶಿಗಳು, ಲೋಕೋಪಯೋಗಿ ಇಲಾಖೆ ಮತ್ತು ನೀರಾವರಿ ಇಲಾಖೆ.
3. ಶ್ರೀ ಎಸ್. ರಾಮದಾಸ್, ನಿವೃತ್ತ ಮುಖ್ಯ ಇಂಜಿನಿಯರ್, ಲೋಕೋಪಯೋಗಿ ಇಲಾಖೆ.
4. ಶ್ರೀ ಎಂ.ಆರ್.ಸಂಜೀವ ಶೆಟ್ಟಿ, ನಿವೃತ್ತ ಮುಖ್ಯ ಇಂಜಿನಿಯರ್, ಲೋಕೋಪಯೋಗಿ ಇಲಾಖೆ.

5. ಶ್ರೀ ಎಸ್. ಎಂ. ಪಂಚಗಟ್ಟಿ, ನಿವೃತ್ತ ಕಾರ್ಯದರ್ಶಿ, ನೀರಾವರಿ ಇಲಾಖೆ.
6. ಶ್ರೀ ಎನ್. ಆರ್. ವೆಂಕಟೇಶ್ ಪ್ರಸಾದ್, ನಿವೃತ್ತ ಕಾರ್ಯದರ್ಶಿ, ನೀರಾವರಿ ಇಲಾಖೆ.
7. ಶ್ರೀ ಎ. ಅಶ್ವಥನಾರಾಯಣ, ನಿವೃತ್ತ ಕಾರ್ಯದರ್ಶಿ, ನೀರಾವರಿ ಇಲಾಖೆ.
8. ಶ್ರೀ ಎನ್. ವೈ. ನಾರಾಯಣ, ನಿವೃತ್ತ ಉಪ ಕಾರ್ಯದರ್ಶಿ, ನೀರಾವರಿ ಇಲಾಖೆ.
9. ಶ್ರೀ ಎ. ಶ್ರೀಧರನ್, ನಿವೃತ್ತ ಪ್ರೊಫೆಸರ್, ಐ.ಐ.ಎಸ್.ಸಿ., ಬೆಂಗಳೂರು.
10. ಶ್ರೀ ಸಂಗನಗೌಡ ಬಸನಗೌಡ ಪಾಟೀಲ್, ನಿವೃತ್ತ ಮುಖ್ಯ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಬಿಜಾಪುರ.

2. ಸದರಿ ಅಧಿಕಾರೇತರ ಸದಸ್ಯರುಗಳು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ:3.2.2001. ರ ಆದೇಶದಂತೆ ಪ್ರವಾಸ ಭತ್ಯೆ ಮತ್ತು ಇತರೆ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

3. ಮೇಲೆ ವಿವರಿಸಿದ ಬೃಹತ್ ನೀರಾವರಿ ಯೋಜನೆಗಳ ನಿಯಂತ್ರಣಾ ಮಂಡಳಿಯ ಕಾರ್ಯವೈಖರಿಗಳು ಈ ಕೆಳಕಂಡಂತಿರುತ್ತವೆ.

a. The MIPC Board shall review the recommendations of Technical Advisory Committee in all the matters of planning, monitoring, estimates, tenders and claims in respect & Medium Irrigation Projects.
b. The Board shall have the powers to deliberate any other subject pertaining to the irrigation sector and also to direct the reference of any files to the Chairman of the Technical Advisory Committee for advice.
c. Necessary Government Orders shall be dirctly issued by the Water Resources Department immediately after clearance by the Board, excepting cases which have to be taken to Cabinet as per the Rules of Business.
d. In respect of cases requiring Cabinet approval, the Water Resources Department shall put up all such cases directly to the Cabinet, immediately after clearance by the MIPC Board.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎಸ್. ರಂಗರಾಜು**
ಪಿ.ಆರ್. 898 ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ, ಎಂಎಂಐ-3),
ಜಲಸಂಪನ್ಮೂಲ ಇಲಾಖೆ

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ 2006-07 ನೇ ಸಾಲಿಗೆ ನೀಡಲಾಗಿರುವ ಆಯವ್ಯಯ ಬೆಂಬಲದ ಮೊದಲನೇ ಕಂತು ರೂ.65 ಕೋಟಿಗಳನ್ನು ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ:** 1. ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ. ಕೆ.ಆರ್. ಡಿ.ಸಿ.ಎಲ್./ಎಂ.ಡಿ/2006-07 /0327 ದಿನಾಂಕ 3.5.2006.
2. ಅನಧಿಕೃತ ಟಿಪ್ಪಣಿ ಸಂಖ್ಯೆ ಲೋ, ಇ 529 ಆ.ಕೋ-1/06 ದಿನಾಂಕ:20.5.2006.

**ಪ್ರಸ್ತಾವನೆ:**

ಓದಲಾದ (1) ರಲ್ಲಿನ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ದಿನಾಂಕ:3.5.2006ರ ಪತ್ರದಲ್ಲಿ ಮೊದಲನೇ ಕಂತು ರೂ.65 ಕೋಟಿಗಳನ್ನು ಗುತ್ತಿಗೆದಾರರುಗಳ ಬಿಲ್ಲುಗಳ ಪಾವತಿಗಾಗಿ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಓದಲಾಗಿರುವ (2) ರಲ್ಲಿನ ದಿನಾಂಕ:20.5.2006ರ ಅನಧಿಕೃತ ಟಿಪ್ಪಣಿಯಲ್ಲಿ 2006-07ನೇ ಸಾಲಿನ ಆಯವ್ಯಯ ಅಂದಾಜಿನಲ್ಲಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಕಾಮಗಾರಿಗಳಿಗಾಗಿ ರೂ.200 ಕೋಟಿ ರೂಪಾಯಿಗಳ ಆಯವ್ಯಯ ಅನುದಾನವನ್ನು ಆರ್ಥಿಕ ಇಲಾಖೆಯಿಂದ ನಿಗಧಿಪಡಿಸಲಾಗಿದೆ.

ಇದರ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸುವ ಅಗತ್ಯತೆ ಇರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ, ಲೋಇ 25 ಇಎಪಿ 2006 ಬೆಂಗಳೂರು, ದಿನಾಂಕ: 23ನೇ ಮೇ 2006**

ಮೇಲಿನ ಪ್ರಸ್ತಾವನೆಯನ್ನು ಕೂಲಂಕೂಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದಿಂದ ಕೈಗೊಂಡಿರುವ ಎರಡನೇ ಹಂತದ ರಾಜ್ಯ ಹೆದ್ದಾರಿಗಳ ನಿರ್ವಹಣೆ ಕಾಮಗಾರಿಯ ಸಲುವಾಗಿ ನಿಗಮಕ್ಕೆ 2006-07ನೇ ಸಾಲಿನ ಆಯವ್ಯಯದಲ್ಲಿ ನಿಗಧಿಪಡಿಸಲಾಗಿರುವ ರೂ.200 ಕೋಟಿಗಳ ಪೈಕಿ ಮೊದಲನೇ ಕಂತು ರೂ. 65ಕೋಟಿ (ರೂಪಾಯಿ ಅರವತ್ತೈದು ಕೋಟಿಗಳು ಮಾತ್ರ)ಗಳನ್ನು ಲೆಕ್ಕಶೀರ್ಷಿಕೆ "3054-03-337-0-05-200" ರಾಜ್ಯ ಹೆದ್ದಾರಿಗಳ ನಿರ್ವಹಣೆ ಅಡಿಯಲ್ಲಿ ಬಿಡುಗಡೆ ಮಾಡಲು ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಲೋ.ಇ 529 ಆ.ಕೋ-1/06 ದಿನಾಂಕ:20.5.2006ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 821 **ಬಿ.ಎ. ವಿಜಯ**
ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ

**ವಿಷಯ:** ಮಂಡ್ಯ ಜಿಲ್ಲೆಯ ಕೆ.ಆರ್. ಪೇಟೆ ತಾಲ್ಲೂಕು ಮತ್ತು ಪಾಂಡವಪುರ ತಾಲ್ಲೂಕುಗಳಿಗೆ ಸೇರಿದ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ

**ಓದಲಾಗಿದೆ:** 1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ:ಮುಇಂ:ಸಂಕದ: ಮೇಲ್ದರ್ಜೆ:ಮಂಡ್ಯ:ಸ್ಇಂ 5:8: 2006-07, ದಿನಾಂಕ:15.5.06.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಮಂಡ್ಯ ಜಿಲ್ಲೆಯ ಕೆ.ಆರ್. ಪೇಟೆ ಮತ್ತು ಪಾಂಡವಪುರ ತಾಲ್ಲೂಕಿಗೆ ಸೇರಿದ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಗಳು ತುಂಬಾ ದುಸ್ಥಿತಿಯಲ್ಲಿದ್ದು ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದುದರಿಂದ ಈ ಗ್ರಾಮೀಣ ರಸ್ತೆಗಳನ್ನು ಸಾರ್ವಜನಿಕರ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| **ಮಂಡ್ಯ ಜಿಲ್ಲೆ, ಪಾಂಡವಪುರ ತಾಲ್ಲೂಕು:** | | |
| 1. | ಮಂಡ್ಯ ತೆಂಡೇಕೆರೆ ರಸ್ತೆಯಿಂದ ಕೆರೆತೋಣ್ಣೂರು-ಮೇಲುಕೋಟೆ ರಸ್ತೆ ಮಾರ್ಗ ಮೂಡಲಕೊಪ್ಪಲು, ಚೀಕನಹಳ್ಳಿ ಹಳೇಬೀಡು, ನೀಲನಹಳ್ಳಿ ಮುಖಾಂತರ | 6.20 |
| 2. | ಶ್ರೀರಂಗಪಟ್ಟಣ-ಜೇವರ್ಗಿ ರಸ್ತೆಯಿಂದ ಚಿನಕುರಳಿ ಮೇಲುಕೋಟೆ ರಸ್ತೆಗೆ ಮಾರ್ಗ ಬೆಳ್ಳಾಳೆ, ಮಾಣಿಕನಹಳ್ಳಿ ಮುಖಾಂತರ | 5.70 |
| 3. | ಚಿನಕುರುಳಿ-ಬೂಕನಕೆರೆ ರಸ್ತೆ | 6.00 |
| 4. | ಮಂಡ್ಯ-ತೆಂಡೇಕೆರೆ ರಸ್ತೆಯ (ಬಿಟ್ಟುಹೋಗಿರುವ ಸರಪಳಿ) | 2.50<br>7.70 |
| 5. | ಪಾಂಡವಪುರದಿಂದ ಚಿನಕುರಳಿಗೆ ಸೇರುವ ರಸ್ತೆ ಮಾರ್ಗ ಕೆ. ಬೆಟ್ಟಹಳ್ಳಿ ಚಾಗಶೆಟ್ಟಿಹಳ್ಳಿ ಬೇಬಿಬೆಟ್ಟ ಮುಖಾಂತರ | 19.00 |
| 6. | ಚಿನಕುರಳಿ-ಮೇಲುಕೋಟೆ ರಸ್ತೆಯಿಂದ ಶ್ರೀರಂಗಪಟ್ಟಣ-ಜೇವರ್ಗಿ ರಸ್ತೆ ಮಾರ್ಗ ದೊಡ್ಡಬೋಗನಹಳ್ಳಿ ಕೆರೆತೋಣ್ಣೂರು, ಟಿ.ಎಸ್. ಛತ್ರ ಮುಖಾಂತರ | 6.00 |
| 7. | ಮಂಡ್ಯ-ಹಡಗಲಿ ರಸ್ತೆಯಿಂದ ಬೇವಿನಕುಪ್ಪೆ ಶಂಭುವಿನಹಳ್ಳಿ ರಸ್ತೆ ಮಾರ್ಗ ಶೆಟ್ಟಿಹಳ್ಳಿ ಅನುವಿನಹಳ್ಳಿ ನರಹಳ್ಳಿ ಮುಖಾಂತರ | 6.50 |
| 8. | ಬಿ.ಬಿ-ಬಿ.ಟಿ ರಸ್ತೆಯಿಂದ ಕ್ಯಾತನಹಳ್ಳಿ ಮಾರ್ಗ ಹರವು, ಚಲುವರಸನಕೊಪ್ಪಲು, ಬ್ಯಾಟೆತಿಮ್ಮನಕೊಪ್ಪಲು ಮುಖಾಂತರ | 7.00 |
| 9. | ಮಂಡ್ಯ ತೆಂಡೇಕೆರೆ ರಸ್ತೆಯಿಂದ ಚಿನಕುರಳಿ-ಮೇಲುಕೋಟೆ ರಸ್ತೆ ಮಾರ್ಗ ನಾರಾಯಣಪುರ ಮಾರ್ಗ ಕಾಮನಾಯಕನಹಳ್ಳಿ, ಸೆಣಬ ಮುಖಾಂತರ | 5.00 |
| 10. | ಕೆ. ಮಲ್ಲನಹಳ್ಳಿಯಿಂದ ಕನಗನಹಳ್ಳಿ ಸೇರುವ ರಸ್ತೆ | 7.50 |
| 11. | ಅಲ್ಪಹಳ್ಳಿಯಿಂದ ಚಿನಕುರಳಿ-ಕಟ್ಟೇರಿ ರಸ್ತೆಯ ಜಾಗಟೆ ಮಲ್ಲೇನಹಳ್ಳಿಗೆ ಮಾರ್ಗವಾಗಿ ಅರಳಕುಪ್ಪೆಗೆ ಸೇರುವ ರಸ್ತೆ | 7.00 |
| 12. | ಪಿ.ಆರ್.ಎಸ್.ಎ. ರಸ್ತೆಯಿಂದ ಕುಕ್ಕಡ ಕ್ಯಾತನಹಳ್ಳಿ ಹರವು ಸೇರುವ ರಸ್ತೆ | 7.00 |
| 13. | ಹಾರೋಹಳ್ಳಿಯಿಂದ ಪಿ.ಆರ್.ಎಸ್.ಎ. ರಸ್ತೆ ಕ್ಯಾತನಹಳ್ಳಿ ಸೇರುವ ರಸ್ತೆ | 8.00 |
| 14. | ಪಿ.ಆರ್.ಎಸ್.ಎ. ರಸ್ತೆಯಿಂದ ಶೀಳನೆರೆಗೆ ಸೇರುವ ರಸ್ತೆ | 5.00 |
| 15. | ಮುರುಕನಹಳ್ಳಿ ಫಾರಂನಿಂದ ಜಕ್ಕಹಳ್ಳಿ ಮಾರ್ಗ ಶೀಳನೆರೆಗೆ ಸೇರುವ ರಸ್ತೆ | 3.50 |
| 16. | ಚಿಟ್ಟನಹಳ್ಳಿಯಿಂದ ಮೇಲುಕೋಟೆ ಸೇರುವ ರಸ್ತೆ | 5.00 |
| **ಮಂಡ್ಯಜಿಲ್ಲೆ, ಕೆ.ಆರ್. ಪೇಟೆ ತಾಲ್ಲೂಕು** | | |
| 1. | ಮೇಲುಕೋಟೆ-ಕೆ.ಆರ್. ಪೇಟೆಯಿಂದ ಅರೆಬೊಪ್ಪನಹಳ್ಳಿ ಚನ್ನಾಪುರ ಬ್ಯಾಲಕೆರೆ ಚಟ್ಟನಹಳ್ಳಿ, ಬೆಣ್ಣೆಕೋಪ್ಪಲು, ಕಾಗೇಪುರ, ಶೀರ್‌ಬಿಲ್ಲೆನಹಳ್ಳಿ, ಚೌಡಘಟ್ಟ ಹೆಮ್ಮಡ್ರಹಳ್ಳಿ ಮಾರ್ಗ ವಸಂತಪುರಕ್ಕೆ ಸೇರುವ ರಸ್ತೆ | 14.00 |
| 2. | ಎಸ್.ಎ. ರಸ್ತೆಯಿಂದ ಹೊನ್ನೇನಹಳ್ಳಿ ಊಚನಹಳ್ಳಿ, ಅಕ್ಕಿಮಂಚನಹಳ್ಳಿ, ಹರಳಹಳ್ಳಿ ಮಾರ್ಗ ಶೀಳನೆರೆ ಸೇರುವ ರಸ್ತೆ | 5.50 |
| 3. | ಎಸ್.ಎ. ರಸ್ತೆಯಿಂದ ಮಲ್ಕೋನಹಳ್ಳಿ ಗೇಟ್- ಚಟ್ಟಂಗರೆಗೇಟ್ -ರಾಜಘಟ್ಟಗೇಟ್, ಗುಡಗನಹಳ್ಳಿ ಗೇಟ್ ಮಾರ್ಗ ಶೀಳನೆರೆ ರಸ್ತೆ | 8.00 |
| 4. | ಮೇಲುಕೋಟೆ-ಕೆ.ಆರ್. ಪೇಟೆ ರಸ್ತೆಯಿಂದ ಸಿಂಧಘಟ್ಟ ಸೇರುವ ರಸ್ತೆ | 3.50 |
| 5. | ಮೇಲುಕೋಟೆ-ಕೆ.ಆರ್. ರಸ್ತೆಯಿಂದ ಬೆಂಗಳೂರು-ಜಲಸೂರು ರಸ್ತೆಗೆ ಸೇರುವ ರಸ್ತೆಯ ಮಾರ್ಗ ಸಿಂಧಘಟ್ಟ ಕೆ.ಬಿ.ಕೊಪ್ಪಲು ಚುಜ್ಜಲಾಕ್ಯಾತನಹಳ್ಳಿ ರಸ್ತೆ | 6.50 |
| 6. | ತಂಡೆಕೆರೆಯಿಂದ -ಚಿನಕುರಳಿ-ಮೇಲುಕೋಟೆ ರಸ್ತೆಗೆ ಸೇರುವ ರಸ್ತೆ ಮಾರ್ಗ ಚಟ್ಟಂಗೆರೆ, ಕೆ.ಜಿ. ಕೋಡಿಹಳ್ಳಿ ನೆಳ್ಳೇನಹಳ್ಳಿ ರಸ್ತೆ ರಸ್ತೆ-4 | 7.50 |

**ಸರ್ಕಾರಿ ಆದೇಶ ಸಂಖ್ಯೆ:ಲೋಇ 116 ಸಿಆರ್‌ಎಂ 2006, ಬೆಂಗಳೂರು, ದಿನಾಂಕ:23ನೇ ಮೇ 2006**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| **ಮಂಡ್ಯ ಜಿಲ್ಲೆ, ಪಾಂಡವಪುರ ತಾಲ್ಲೂಕು:** | | |
| 1. | ಮಂಡ್ಯ ತೆಂಡೇಕೆರೆ ರಸ್ತೆಯಿಂದ ಕೆರೆತೋಣ್ಣೂರು-ಮೇಲುಕೋಟೆ ರಸ್ತೆ ಮಾರ್ಗ ಮೂಡಲಕೊಪ್ಪಲು, ಚೀಕನಹಳ್ಳಿ ಹಳೇಬೀಡು, ನೀಲನಹಳ್ಳಿ ಮುಖಾಂತರ | 6.20 |
| 2. | ಶ್ರೀರಂಗಪಟ್ಟಣ-ಜೇವರ್ಗಿ ರಸ್ತೆಯಿಂದ ಚಿನಕುರಳಿ ಮೇಲುಕೋಟೆ ರಸ್ತೆಗೆ ಮಾರ್ಗ ಬೆಳ್ಳಾಳೆ, ಮಾಣಿಕನಹಳ್ಳಿ ಮುಖಾಂತರ | 5.70 |
| 3. | ಚಿನಕುರುಳಿ-ಬೂಕನಕೆರೆ ರಸ್ತೆ | 6.00 |
| 4. | ಮಂಡ್ಯ-ತೆಂಡೇಕೆರೆ ರಸ್ತೆಯ (ಬಿಟ್ಟುಹೋಗಿರುವ ಸರಪಳಿ) | 2.50<br>7.70 |
| 5. | ಪಾಂಡವಪುರದಿಂದ ಚಿನಕುರಳಿಗೆ ಸೇರುವ ರಸ್ತೆ ಮಾರ್ಗ ಕೆ. ಬೆಟ್ಟಹಳ್ಳಿ ಚಾಗಶೆಟ್ಟಿಹಳ್ಳಿ ಬೇಬಿಬೆಟ್ಟ ಮುಖಾಂತರ | 19.00 |
| 6. | ಚಿನಕುರಳಿ-ಮೇಲುಕೋಟೆ ರಸ್ತೆಯಿಂದ ಶ್ರೀರಂಗಪಟ್ಟಣ-ಜೇವರ್ಗಿ ರಸ್ತೆ ಮಾರ್ಗ ದೊಡ್ಡಬೋಗನಹಳ್ಳಿ ಕೆರೆತೋಣ್ಣೂರು, ಟಿ.ಎಸ್. ಛತ್ರ ಮುಖಾಂತರ | 6.00 |
| 7. | ಮಂಡ್ಯ-ಹಡಗಲಿ ರಸ್ತೆಯಿಂದ ಬೇವಿನಕುಪ್ಪೆ ಶಂಭುವಿನಹಳ್ಳಿ ರಸ್ತೆ ಮಾರ್ಗ ಶೆಟ್ಟಿಹಳ್ಳಿ ಅನುವಿನಹಳ್ಳಿ ನರಹಳ್ಳಿ ಮುಖಾಂತರ | 6.50 |
| 8. | ಬಿ.ಬಿ-ಬಿ.ಟಿ ರಸ್ತೆಯಿಂದ ಕ್ಯಾತನಹಳ್ಳಿ ಮಾರ್ಗ ಹರವು, ಚಲುವರಸನಕೊಪ್ಪಲು, ಬ್ಯಾಟೆತಿಮ್ಮನಕೊಪ್ಪಲು ಮುಖಾಂತರ | 7.00 |

| | | |
|---|---|---|
| 9. | ಮಂಡ್ಯ ತೆಂಡೇಕೆರೆ ರಸ್ತೆಯಿಂದ ಚಿನಕುರಳಿ-ಮೇಲುಕೋಟೆ ರಸ್ತೆ ಮಾರ್ಗ ನಾರಾಯಣಪುರ ಮಾರ್ಗ ಕಾಮನಾಯಕನಹಳ್ಳಿ, ಸೆಣಬ ಮುಖಾಂತರ | 5.00 |
| 10. | ಕೆ. ಮಲ್ಲನಹಳ್ಳಿಯಿಂದ ಕನಗನಹಳ್ಳಿ ಸೇರುವ ರಸ್ತೆ | 7.50 |
| 11. | ಅಲ್ಪಹಳ್ಳಿಯಿಂದ ಚಿನಕುರಳಿ-ಕಟ್ಟೇರಿ ರಸ್ತೆಯ ಜಾಗಟೆ ಮಲ್ಲೇನಹಳ್ಳಿಗೆ ಮಾರ್ಗವಾಗಿ ಅರಳಕುಪ್ಪೆಗೆ ಸೇರುವ ರಸ್ತೆ | 7.00 |
| 12. | ಪಿ.ಆರ್.ಎಸ್.ಎ. ರಸ್ತೆಯಿಂದ ಕುಕ್ಕಡ ಕ್ಯಾತನಹಳ್ಳಿ ಹರವು ಸೇರುವ ರಸ್ತೆ | 7.00 |
| 13. | ಹಾರೋಹಳ್ಳಿಯಿಂದ ಪಿ.ಆರ್.ಎಸ್.ಎ. ರಸ್ತೆ ಕ್ಯಾತನಹಳ್ಳಿ ಸೇರುವ ರಸ್ತೆ | 8.00 |
| 14. | ಪಿ.ಆರ್.ಎಸ್.ಎ. ರಸ್ತೆಯಿಂದ ಶೀಳನೆರೆಗೆ ಸೇರುವ ರಸ್ತೆ | 5.00 |
| 15. | ಮುರುಕನಹಳ್ಳಿ ಫಾರಂನಿಂದ ಜಕ್ಕಹಳ್ಳಿ ಮಾರ್ಗ ಶೀಳನೆರೆಗೆ ಸೇರುವ ರಸ್ತೆ | 3.50 |
| 16. | ಚಿಟ್ಟನಹಳ್ಳಿಯಿಂದ ಮೇಲುಕೋಟೆ ಸೇರುವ ರಸ್ತೆ | 5.00 |
| **ಮಂಡ್ಯಜಿಲ್ಲೆ, ಕೆ.ಆರ್. ಪೇಟೆ ತಾಲ್ಲೂಕು** | | |
| 1. | ಮೇಲುಕೋಟೆ-ಕೆ.ಆರ್. ಪೇಟೆಯಿಂದ ಅರೆಬೊಪ್ಪನಹಳ್ಳಿ ಚನ್ನಾಪುರ ಬ್ಯಾಲಕೆರೆ ಚಟ್ಟನಹಳ್ಳಿ, ಬೆಣ್ಣೆಕೊಪ್ಪಲು, ಕಾಗೇಪುರ, ಶೀರ್‌ಬಿಲ್ಲೆನಹಳ್ಳಿ, ಚೌಡಘಟ್ಟ ಹೆಮ್ಮಡಹಳ್ಳಿ ಮಾರ್ಗ ವಸಂತಪುರಕ್ಕೆ ಸೇರುವ ರಸ್ತೆ | 14.00 |
| 2. | ಎಸ್.ಎ. ರಸ್ತೆಯಿಂದ ಹೊನ್ನೇನಹಳ್ಳಿ ಊಚನಹಳ್ಳಿ, ಅಕ್ಕಿಮಂಚನಹಳ್ಳಿ, ಹರಳಹಳ್ಳಿ ಮಾರ್ಗ ಶೀಳನೆರೆ ಸೇರುವ ರಸ್ತೆ | 5.50 |
| 3. | ಎಸ್.ಎ. ರಸ್ತೆಯಿಂದ ಮಲ್ಕೋನಹಳ್ಳಿ ಗೇಟ್- ಚಟ್ಟಂಗರೆಗೇಟ್ -ರಾಜಘಟ್ಟಗೇಟ್, ಗುಡಗನಹಳ್ಳಿ ಗೇಟ್ ಮಾರ್ಗ ಶೀಳನೆರೆ ರಸ್ತೆ | 8.00 |
| 4. | ಮೇಲುಕೋಟೆ-ಕೆ.ಆರ್. ಪೇಟೆ ರಸ್ತೆಯಿಂದ ಸಿಂಧಘಟ್ಟ ಸೇರುವ ರಸ್ತೆ | 3.50 |
| 5. | ಮೇಲುಕೋಟೆ-ಕೆ.ಆರ್. ರಸ್ತೆಯಿಂದ ಬೆಂಗಳೂರು-ಜಲಸೂರು ರಸ್ತೆಗೆ ಸೇರುವ ರಸ್ತೆಯ ಮಾರ್ಗ ಸಿಂಧಘಟ್ಟ ಕೆ.ಬಿ.ಕೊಪ್ಪಲು ಚುಜ್ವಲಾಕ್ಯಾತನಹಳ್ಳಿ ರಸ್ತೆ | 6.50 |
| 6. | ತಂಡೆಕೆರೆಯಿಂದ-ಚಿನಕುರಳಿ-ಮೇಲುಕೋಟೆ ರಸ್ತೆಗೆ ಸೇರುವ ರಸ್ತೆ ಮಾರ್ಗ ಚಟ್ಟಂಗೆರೆ, ಕೆ.ಜಿ. ಕೋಡಿಹಳ್ಳಿ ನೆಲ್ಲೀನಹಳ್ಳಿ ರಸ್ತೆ-4 | 7.50 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ.ಆರ್. ಶಶಿಧರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಲೋಕೋಪಯೋಗಿ ಇಲಾಖೆ. (ಸಂಪರ್ಕ)

ಪಿ.ಆರ್. 822

## ಕಂದಾಯ ಸಚಿವಾಲಯ

**ವಿಷಯ:** ದೇಶೀಯ ವಿದ್ಯಾ ಶಾಲಾ ಸಮಿತಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಈ ಸಮಿತಿಗೆ ಆಡಳಿತಾಧಿಕಾರಿ ನೇಮಕ ಕುರಿತು.

**ಓದಲಾಗಿದೆ:**
1. ಜಿಲ್ಲಾ ನೋಂದಣಾಧಿಕಾರಿಗಳ ಪತ್ರ ಸಂಖ್ಯೆ:ಜಿನೋಶಿ:ಸಂಘ/77/2005-06 ದಿನಾಂಕ:18.2.2006.
2. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಕಂಇ 17 ಮುನೊಸೊ 2006, ದಿನಾಂಕ:28.3.2006.
3. ಅಧ್ಯಕ್ಷರು ಹಾಗೂ ಕಾರ್ಯದರ್ಶಿಗಳು, ದೇಶೀಯ ವಿದ್ಯಾ ಶಾಲಾ ಸಮಿತಿ, ಶಿವಮೊಗ್ಗ, ಇವರ ಲಿಖಿತ ಹೇಳಿಕೆ ಸಂಖ್ಯೆ: ದೇವಿಶ/7/2006-07, ದಿನಾಂಕ:17.4.2006.

**ಪ್ರಸ್ತಾವನೆ:**

ಮೇಲೆ ಓದಲಾದ (1) ಜಿಲ್ಲಾ ನೋಂದಾಣಾಧಿಕಾರಿಗಳ ಪತ್ರದಲ್ಲಿ ದೇಶೀಯ ವಿದ್ಯಾ ಶಾಲಾ ಸಮಿತಿ, ಶಿವಮೊಗ್ಗ ಈ ಸಂಸ್ಥೆಯು 1953-54 ನೇ ಸಾಲಿನಲ್ಲಿ 937 ನೇ ನಂಬರ್‌ಯಾಗಿ ನೋಂದಣಿಯಾಗಿದ್ದು, ಸದರಿ ಸಂಸ್ಥೆಯ ಲೆಕ್ಕ ಪತ್ರ ಸಲ್ಲಿಸಲು ಜ್ಞಾಪನ ಜಾರಿ ಮಾಡಲಾಗಿತ್ತು. ಅದಕ್ಕೆ ಸಂಸ್ಥೆ ಹೇಳಿಕೆ ನೀಡುತ್ತಾ, ಸರ್ವ ಸದಸ್ಯರ ಸಭೆಯನ್ನು ನಡೆಸಲು ಹಲವಾರು ಕಾನೂನು ತೊಡಕುಗಳಿರುವುದರಿಂದ ಅಲ್ಲದೆ ಈ ಕುರಿತು ಶಿವಮೊಗ್ಗ ಪ್ರಿನ್ಸಿಪಲ್ ಸಿವಿಲ್ ನ್ಯಾಯಾಲಯದಲ್ಲಿ ಪ್ರಕರಣ ಬಾಕಿ ಇರುವುದರಿಂದ ಈ ಕಾನೂನು ತೊಡಕುಗಳನ್ನು ಬಗೆಹರಿಸಿ ಸರ್ವ ಸದಸ್ಯರ ಸಭೆ ನಡೆಸಲಾಗುವುದೆಂದು ಹೇಳಿಕೆ ನೀಡಿದ್ದ ಹಿನ್ನೆಲೆಯಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು ವರದಿ ನೀಡುತ್ತಾ, 1953-54ನೇ ಸಾಲಿನ ಇಲ್ಲಿಯವರೆಗೆ ಸಂಸ್ಥೆಯು ನೋಂದಣಿ ಕಾಯ್ದೆ 1960 ರ ಕಲಂ 11 ಮತ್ತು 13 ರ ಪ್ರಕಾರ ದಾಖಲಾತಿ ಸಲ್ಲಿಸದೆ ಇರುವುದರಿಂದ ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ನೌಕರರ ಮತ್ತು ಶಾಲಾ ಮಕ್ಕಳ ಹಿತದೃಷ್ಟಿಯಿಂದ ಮತ್ತು ಸಂಸ್ಥೆಯ ಇತ್ತೀಚಿನ ವಿದ್ಯಮಾನಗಳನ್ನು ಪರಿಶೀಲಿಸಿದಾಗ, ಕಾನೂನು ಮತ್ತು ಶಾಂತಿಭಂಗವಾಗುವಂತಹ ವಾತಾವರಣ ನಿರ್ಮಾಣವಾಗದಂತೆ, ಪರಿಸ್ಥಿತಿಯನ್ನು ಕಾಪಾಡುವ ಹಾಗೂ ಸಂಘದ ಹಿತಾಸಕ್ತಿಯಿಂದ ಸಂಘಕ್ಕೆ ಆಡಳಿತಾಧಿಕಾರಿ ನೇಮಕ ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಜಿಲ್ಲಾ ನೋಂದಣಾಧಿಕಾರಿಗಳ ವರದಿಯನ್ನು ಪರಿಶೀಲಿಸಿ ಓದಲಾದ (2) ರ ಪ್ರಕಾರ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ಏಕೆ ನೇಮಕ ಮಾಡಬಾರದು ಎಂಬ ಬಗ್ಗೆ ಕಾರಣ ಕೇಳಿ ನೋಟೀಸ್ ಜಾರಿ ಮಾಡಲಾಯಿತು. ಓದಲಾದ (3)ರ ಪ್ರಕಾರ ಸಂಸ್ಥೆಯ ಕಾರ್ಯದರ್ಶಿಗಳು ಲಿಖಿತ ಹೇಳಿಕೆ ನೀಡುತ್ತಾ, ದೇಶಿಯ ವಿದ್ಯಾಶಾಲಾ ಸಮಿತಿಯ ಎಲ್ಲಾ ಲೆಕ್ಕಪತ್ರಗಳನ್ನು ಚಾರ್ಟ್‌ಟ್ಡ್ ಅಕೌಂಟೆಂಟ್ ರವರಿಂದ ಆಡಿಟ್ ಮಾಡಿಸಿದೆ. ಹಾಗೂ ಸದರಿ ಲೆಕ್ಕ ಪತ್ರಗಳನ್ನು ಕಾರ್ಯಕಾರಿ ಸಮಿತಿ ಸಭೆ ಅಂಗೀಕರಿಸಿದೆ. ಆಡಿಟ್ ಲೆಕ್ಕಪತ್ರಗಳನ್ನು ಆಯಾಯಾ ಕಾಲಕ್ಕೆ ಅನುಗುಣವಾಗಿ ಆದಾಯ ತೆರಿಗೆ ಅಧಿಕಾರಿಗಳಿಗೆ ಸಲ್ಲಿಸಲಾಗಿದೆ. ಆದರೆ ಸರ್ವ ಸದಸ್ಯರ ಸಭೆ ಕರೆದು ಲೆಕ್ಕಪತ್ರಗಳನ್ನು ಅನುಮೋದಿಸಲು ಕಾರ್ಯಕಾರಿ ಮಂಡಳಿ ಚುನಾಯಿಸಲು ಸದಸ್ಯರ ಬಗ್ಗೆ ವ್ಯಾಜ್ಯವು ನ್ಯಾಯಾಲಯದಲ್ಲಿ ಬಾಕಿ ಇದ್ದುದರಿಂದ ಸರ್ವ ಸದಸ್ಯರ ಸಭೆಯನ್ನು ಕರೆದಿರುವುದಿಲ್ಲ. ಆದ್ದರಿಂದ ನ್ಯಾಯಾಲಯದ ಪ್ರಕರಣ ಮುಕ್ತಾಯಗೊಂಡ ನಂತರ ನಿಯಮಗಳ ಪ್ರಕಾರ ಕ್ರಮ ಜರುಗಿಸಲಾಗುವುದೆಂದು ಹಾಗೂ ಜಿಲ್ಲಾ ನೋಂದಣಾಧಿಕಾರಿಗಳ ಶಿಫಾರಸ್ಸು ಕೈಬಿಡಬೇಕೆಂದು ಕೋರಿದ್ದಾರೆ. ಸದರಿ ಲಿಖಿತ ಹೇಳಿಕೆಯನ್ನು ಸರ್ಕಾರವು ಪರಿಶೀಲಿಸಿ ಸಂಘದ ಹೇಳಿಕೆಯನ್ನು ಒಪ್ಪದೆ ಸಾರ್ವಜನಿಕ ಹಾಗೂ ಶಾಲಾ ಮಕ್ಕಳ ಹಿತದೃಷ್ಟಿಯಿಂದ ಆಡಳಿತಾಧಿಕಾರಿ ನೇಮಕ ಮಾಡಲು ಸರ್ಕಾರವು ತೀರ್ಮಾನಿಸಿ ಅದರಂತೆ ಈ ಕೆಳಕಂಡ ಆದೇಶ.

### ಸರ್ಕಾರಿ ಆದೇಶ ಸಂಖ್ಯೆ:ಕಂಇ 17 ಮುನೊಸೊ 2006, ಬೆಂಗಳೂರು, ದಿನಾಂಕ : 6ನೇ ಜೂನ್ 2006

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸಾರ್ವಜನಿಕ ಹಾಗೂ ಶಾಲಾ ಮಕ್ಕಳ ಹಿತದೃಷ್ಟಿಯಿಂದ ದೇಶೀಯ ವಿದ್ಯಾ ಶಾಲಾ ಸಮಿತಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಈ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ಕಲಂ 27-ಎ (1) ಪ್ರಕಾರ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ಉಪ ವಿಭಾಗಾಧಿಕಾರಿ, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ ಜಿಲ್ಲೆ, ಇವರನ್ನು ಆಡಳಿತಾಧಿಕಾರಿಯನ್ನಾಗಿ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದೊ ಮೊದಲೊ ಅಲ್ಲಿಯವರೆಗೆ ನೇಮಿಸಿದೆ.

ಆಡಳಿತಾಧಿಕಾರಗಳು ಈ ಅವಧಿಯಲ್ಲಿ ಸಂಘದ ಅವ್ಯವಹಾರಗಳನ್ನು ಸರಿಪಡಿಸಿ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಿವಲಿಂಗ**
ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 916